

# ಕರ್ನಾಟಕ ಸ್ಕೌಟ್ ಮತ್ತು ಗೈಡ್ ವಾರ್ತಾ ಪತ್ರಿಕೆ



# KARNATAKA SCOUT & GUIDE News Magazine

VOL. - 6 APRIL - 2006 No. - 03




ದಿನಾಂಕ 22ನೇ ಮಾರ್ಚ್‌ನಿಂದ 26ರವರೆಗೆ ಬೆಸೆಂಟ್ ಪಾರ್ಕ್‌ನಲ್ಲಿ ನಡೆದ ದಕ್ಷಿಣ ಪ್ರಾಂತೀಯ ಒಕ್ಕೂಟದಲ್ಲಿ ಪಾಲ್ಗೊಂಡ ಕರ್ನಾಟಕದ ಸ್ಕೌಟ್ಸ್ ಮತ್ತು ಗೈಡ್ಸ್



ದಿನಾಂಕ 29ನೇ ಮಾರ್ಚ್‌ನಿಂದ 2ನೇ ಏಪ್ರಿಲ್‌ವರೆಗೆ ಮಂಗಳೂರಿನಲ್ಲಿ ನಡೆದ ಸಮುದ್ರ ತೀರದ ಚಾರಣದಲ್ಲಿ ಭಾಗವಹಿಸಿದ ಕರ್ನಾಟಕದ ರೋವರ್ಸ್ ಮತ್ತು ರೇಂಜರ್ಸ್‌ಗಳು



ಪಲ್ಸ್ ಪೋಲಿಯೋ ಲಸಿಕೆ ಹಾಕುವ ಕಾರ್ಯಕ್ರಮದಲ್ಲಿ ಭಾಗವಹಿಸಿದ ಸ್ಕೌಟ್ಸ್ ಮತ್ತು ಗೈಡ್ಸ್ ಮಕ್ಕಳು

## ಪಲ್ಸ್ ಪೋಲಿಯೋ ಲಸಿಕಾ ಕಾರ್ಯಕ್ರಮ 2006

**ನೆನಪಿಡಿ**

ಮೇ 21 ರಂದು ಜರುಗುವ "ಪಲ್ಸ್ ಪೋಲಿಯೊ ಲಸಿಕಾ" ಕಾರ್ಯಕ್ರಮದಲ್ಲಿ ರಾಜ್ಯದ ಎಲ್ಲಾ ಸ್ಕೌಟ್/ಗೈಡ್‌ಗಳು, ಸ್ಕೌಟರ್-ಗೈಡರ್‌ಗಳು, ಮುಕ್ತ ದಳಗಳು, ಸ್ಥಳೀಯ ಹಾಗೂ ಜಿಲ್ಲಾ ಸಂಸ್ಥೆಗಳು ಸಕ್ರಿಯವಾಗಿ ಭಾಗವಹಿಸಲು ಕೋರಿದೆ.

"ಬನ್ನಿ ಎರಡು ಹನಿ ಪೋಲಿಯೋ ಲಸಿಕೆ ಹಾಕುವುದರಿಂದ ಪೋಲಿಯೊ ನಿರ್ಮೂಲನ ಕಾರ್ಯದಲ್ಲಿ ಪಾಲ್ಗೊಳ್ಳೋಣ"

## ರಾಜ್ಯ ತರಬೇತಿ ಕೇಂದ್ರ, ಬೆಸೆಂಟ್ ಪಾರ್ಕ್‌ನಲ್ಲಿ ನಡೆದ ಶಿಬಿರದಲ್ಲಿ ಸ್ಕೌಟ್/ಗೈಡ್‌ಗಳು



ಸ್ವಚ್ಛತಾ ಕಾರ್ಯಕ್ರಮವೊಂದರಲ್ಲಿ ಭಾಗವಹಿಸಿದ ಸ್ಕೌಟ್ಸ್ ಮತ್ತು ಗೈಡ್ಸ್‌ಗಳು



ಸಾಹಸ ಚಾರಣವೊಂದರಲ್ಲಿ ಭಾಗವಹಿಸಿದ ಸ್ಕೌಟ್ಸ್ ಮತ್ತು ಗೈಡ್ಸ್‌ಗಳು



ಸಾಹಸ ಚಾರಣವೊಂದರಲ್ಲಿ ಭಾಗವಹಿಸಿದ ಸ್ಕೌಟ್ಸ್ ಮತ್ತು ಗೈಡ್ಸ್‌ಗಳು




Vol - 6 April - 2006 No. 3



## ಪರಿವಿಡಿ



**Scouting / Guiding helps build a better Society**
**Where young People play a Constructive Role**
**Scouting / Guiding is Education for Life**

# ರಾಜ್ಯ ಮುಖ್ಯ ಆಯುಕ್ತರ ನುಡಿ.......................



**ಮಾನ್ಯರೆ,**

2006-2007 ವಾರ್ಷಿಕ ವರ್ಷ ಪ್ರಾರಂಭವಾಗಿದೆ. ಹೋದ ವರ್ಷದಲ್ಲಿ ದಳ, ಸ್ಥಳೀಯ ಹಾಗೂ ಜಿಲ್ಲಾ ಮಟ್ಟದಲ್ಲಿ ಜರುಗಿರುವ ತರಬೇತಿ ಶಿಬಿರಗಳು ಹಾಗೂ ಕಾರ್ಯಕ್ರಮಗಳನ್ನು ನಾವು ಹಾಕಿಕೊಂಡ ಯೋಜನೆಗಳ ಪ್ರಕಾರ ಜರುಗಿರುವ ಬಗ್ಗೆ ನಾವುಗಳು ವಿಮರ್ಶೆ ಮಾಡಬೇಕಿದೆ.

ಹಲವು ಜಿಲ್ಲೆಗಳಲ್ಲಿ ತರಬೇತಿ ಶಿಬಿರಗಳು ಹೋದ ವರ್ಷದಲ್ಲಿ ಜರುಗಿಲ್ಲದಿರುವುದು ನನ್ನ ಗಮನಕ್ಕೆ ಬಂದಿದೆ. ಪ್ರತಿವರ್ಷವೂ ಮೂಲ ತರಬೇತಿ ಶಿಬಿರಗಳನ್ನು ನಡೆಸಬೇಕಾದ್ದು ಸ್ಥಳೀಯ ಹಾಗೂ ಜಿಲ್ಲಾ ಸಂಸ್ಥೆಗಳ ಆದ್ಯ ಕರ್ತವ್ಯವಾಗಿದೆ. ಇದರ ಬಗ್ಗೆ ಸಲಹೆ - ಸೂಚನೆ - ಮಾರ್ಗದರ್ಶನ ಮಾಡುವುದು ಜಿಲ್ಲಾ ಸಂಘಟಕರುಗಳ ಪ್ರಮುಖ ಹಾಗೂ ಆದ್ಯ ಜವಾಬ್ದಾರಿಯಾಗಿದೆ. ಇವುಗಳ ಮೇಲ್ವಿಚಾರಣೆ ರಾಜ್ಯ ತರಬೇತಿ ಹಾಗೂ ಸಂಘಟನಾ ಆಯುಕ್ತರುಗಳದ್ದು. ಹಲವು ಜಿಲ್ಲೆಗಳಲ್ಲಿ ತರಬೇತಿ ನಡೆಯದಿರಲು ನನ್ನ ಅನಿಸಿಕೆ ಏನೆಂದರೆ, ವರ್ಷದ ಆರಂಭದಲ್ಲೇ ನಾವು ಸಂಬಂದಪಟ್ಟ ಕ್ಷೇತ್ರ ಶಿಕ್ಷಣಾದಿಕಾರಿಗಳು ಹಾಗೂ ಉಪನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ ಇವರುಗಳೊಂದಿಗೆ ವಿವರವಾಗಿ ವಾರ್ಷಿಕ ಯೋಜನೆ ಬಗ್ಗೆ ಚರ್ಚಿಸಿ, ಇಲಾಖೆಯ ಸಂಪೂರ್ಣ ಸಹಾಯ ಹಾಗೂ ಸಹಯೋಗದೊಂದಿಗೆ ಮಾಡಿದಲ್ಲಿ ಪ್ರತಿವರ್ಷವೂ ನಾವು ಮೂಲ ತರಬೇತಿ ಶಿಬಿರ ನಡೆಸುವಲ್ಲಿ ಯಾವುದೇ ಅನಾನುಕೂಲವಾಗುವುದಿಲ್ಲ ಎಂಬ ಭರವಸೆ ನನಗಿದೆ. ಇದು ನಮುಗೆಲ್ಲಾ ಗೊತ್ತಿರುವ ವಿಚಾರವಾದರೂ, ಹಲವು ಜಿಲ್ಲೆಗಳಲ್ಲಿ ಈ ಬಗ್ಗೆ ವಿಳಂಬ ಆಗಿರುವುದು ನನ್ನ ಗಮನಕ್ಕೆ ಬಂದಿರುವುದರಿಂದ ಮತ್ತೊಮ್ಮೆ ನಿಮಗೆಲ್ಲಾ ಇದರ ಪ್ರಾಮುಖ್ಯತೆಯನ್ನು ಗಮನದಲ್ಲಿಟ್ಟುಕೊಂಡು ಈ ವರ್ಷದಲ್ಲಿ ಜಿಲ್ಲೆಯ ಕಾರ್ಯ ಯೋಜನೆಗಳನ್ನು ರೂಪಿಸಿಕೊಳ್ಳಬೇಕೆಂದು ಸಂಬಂಧಪಟ್ಟವರೆಲ್ಲರಲ್ಲಿ ಮನವಿ ಮಾಡುತ್ತೇನೆ.

ಯುವಜನ ಸೇವಾ ಹಾಗೂ ಕ್ರೀಡಾ ಇಲಾಖೆ, ಸಾರ್ವಜನಿಕ ಶಿಕ್ಷಣ ಇಲಾಖೆ, ರಾಜ್ಯ ಹಣಕಾಸಿನ ಇಲಾಖೆ, ಈ ಯುವ ಚಳವಳಿಯ ಬೆಳವಣಿಗೆಗೆ ಈ ವರ್ಷದಲ್ಲಿ ಹೆಚ್ಚಿನ ನೆರವನ್ನು ನೀಡುವುದರ ಮೂಲಕ ಪ್ರೋತ್ಸಹ ನೀಡಿರುವುದಕ್ಕೆ, ಸನ್ಮಾನ್ಯ ಮುಖ್ಯಮಂತ್ರಿಗಳಿಗೂ, ಸನ್ಮಾನ್ಯ ಉಪಮುಖ್ಯಮಂತ್ರಿಗಳಿಗೂ ಹಾಗೂ ವಿವಿಧ ಇಲಾಖೆಗಳ ಮುಖ್ಯಸ್ಥರುಗಳಿಗೂ ಹಾಗೂ ಎಲ್ಲಾ ಹಂತದ ಅಧಿಕಾರಿಗಳಿಗೂ ರಾಜ್ಯ ಸಂಸ್ಥೆಯ ಹೃತ್ಪೂರ್ವದ ಧನ್ಯವಾದಗಳು.

ಈ ವರ್ಷದಲ್ಲಿ ರಾಜ್ಯದ ಮೂರು ತರಬೇತಿ ಕೇಂದ್ರಗಳಾದ ಶಾಂತಿಗೃಹ, ಬೆಂಗಳೂರು, ಬೆಸೆಂಟ್ ಪಾರ್ಕ್, ದೊಡ್ಡಬಳ್ಳಾಪುರ ಹಾಗು ಕೊಂಡಜ್ಜಿಯಲ್ಲಿ ಮೂಲಭೂತ ಸೌಕರ್ಯಗಳ ಅಭಿವೃದ್ಧಿ ಬಗ್ಗೆ ರಾಜ್ಯ ಸರ್ಕಾರಕ್ಕೆ ವಿಶೇಷ ಅನುದಾನಕ್ಕಾಗಿ ಕೋರಿಕೆ ಸಲ್ಲಿಸಿದ್ದು. ಈ ಬಗ್ಗೆಯೂ ಕೂಡ ಸರ್ಕಾರ ಈ ಭಾರಿ ಹೆಚ್ಚಿನ ಅನುದಾನ ನೀಡಿರುವುದಕ್ಕೆ ರಾಜ್ಯ ಸರ್ಕಾರಕ್ಕೆ ನಮ್ಮ ಹೃತ್ಪೂರ್ವಕ ಧನ್ಯವಾದಗಳನ್ನು ಸಲ್ಲಿಸುತ್ತೇನೆ.

ಈ ತಿಂಗಳ 17 ರಂದು ನಾನು ದಾವಣಗೆರೆ ಲೋಕಸಭಾ ಸದಸ್ಯರಾದ ಸನ್ಮಾನ್ಯ ಶ್ರೀ ಜಿ.ಎಂ. ಸಿದ್ದೇಶ್ವರ ಅವರನ್ನು ಭೇಟಿ ಮಾಡಿ ಕೊಂಡಜ್ಜಿ ಶಿಬಿರದಲ್ಲಿ ಈಗಾಗಲೇ ಮುಕ್ತಾಯದ ಹಂತದಲ್ಲಿರುವ "ಆಡಿಯೊ ವಿಶುಯಲ್ ಕಂಪ್ಯೂಟರ್ ಕೊಠಡಿ ಹಾಗೂ ಉಪನ್ಯಾಸ ಸಭಾಂಗಣ"ಕ್ಕೆ ಅವರ ಸ್ಥಳೀಯ ಕ್ಷೇತ್ರದ ಅಭಿವೃದ್ಧಿ ನಿಧಿಯಲ್ಲಿ ರೂ. 3 ಲಕ್ಷಗಳನ್ನು ಕೋರಿದ್ದು, ಮುಂದಿನ ಎರಡು-ಮೂರು ತಿಂಗಳಲ್ಲಿ ಬಿಡುಗಡೆ ಗೊಳಿಸುವುದಾಗಿ ಆಶ್ವಾಸನೆ ನೀಡಿದ್ದಾರೆ.

ಅಂದೇ ನಾನು ದಾವಣಗೆರೆ ಜಿಲ್ಲಾಧಿಕಾರಿಗಳಾದ ಶ್ರೀ ಎಂ.ಬಿ. ದ್ಯಾಬೇರಿ ಅವರನ್ನು ಭೇಟಿ ಮಾಡಿ ಜಿಲ್ಲೆಯಲ್ಲಿ ಸ್ಕೌಟ್-ಗೈಡ್ ಚಳವಳಿಯ ಸಮಗ್ರ ಬೆಳವಣಿಗೆಗೆ ಹಾಗೂ ಕೊಂಡಜ್ಜಿ ತರಬೇತಿ ಕೇಂದ್ರ ಅಭಿವೃದ್ಧಿಗೆ ನೆರವು ನೀಡಲು ಕೋರಿದ್ದೇನೆ. ಅವರಿಂದಲೂ ಸೂಕ್ತ ಭರವಸೆ ಸಿಕ್ಕಿದೆ.

ನಮ್ಮ ಸಂಸ್ಥೆಯ ಹಿರಿಯ ಸದಸ್ಯರೂ, ಸಹಾಯಕ ರಾಜ್ಯ ಆಯುಕ್ತರು (ಗೈಡ್ಸ್) ಗುಲ್ಬರ್ಗ ವಿಭಾಗ ಹಾಗೂ ಸನ್ಮಾನ್ಯ ಸದಸ್ಯರು, ಕರ್ನಾಟಕ ವಿಧಾನ ಪರಿಷತ್ ಆದ ಶ್ರೀಮತಿ ರತ್ನ ವಿ. ಕುಶನೂರ್ ಅವರು ತಮಗೆ ಲಭ್ಯವಿರುವ ಅಭಿವೃದ್ಧಿ ನಿಧಿಯಿಂದ "ಶಾಂತಿ ಗೃಹ" ದಲ್ಲಿ "ಆಡಿಯೋ ವಿಶುಯಲ್ - ಕಂಪ್ಯೂಟರ್ ಕೊಠಡಿ ಹಾಗೂ ಉಪನ್ಯಾಸ ಸಭಾಂಗಣದ" ನಿರ್ಮಾಣಕ್ಕೆ ರೂ. ಐದು ಲಕ್ಷಗಳನ್ನು ನೀಡಿರುತ್ತಾರೆ. ಇವರಿಗೆ ಸಂಸ್ಥೆಯ ಪರವಾಗಿ ಹೃತ್ಪೂರ್ವಕ ದನ್ಯವಾದಗಳು.

ಮುಂದಿನ ತಿಂಗಳಲ್ಲಿ ಸಾಕಷ್ಟು ಕಾರ್ಯಕ್ರಮಗಳನ್ನು ರಾಜ್ಯ ಸಂಸ್ಥೆ ಹಮ್ಮಿಕೊಂಡಿದೆ. ಅವುಗಳಲ್ಲಿ ರಾಜ್ಯ ಮಟ್ಟದ ವಕ್ಷಮಣಿದಾರಿಗಳ ಹಾಗೂ ತರಬೇತುದಾರರ ಸಮಾವೇಶಗಳು, ರಾಜ್ಯ ಮಟ್ಟದ ಕಬ್‌ಬುಲ್‌ಬುಲ್ ಉತ್ಸವ, ಬೆಂಗಳೂರು ರಾಜಭವನದಲ್ಲಿ ಜರುಗುವ ರಾಜ್ಯ ಪುರಸ್ಕಾರ ಪದಕಗಳ ವಿತರಣೆ ಹಾಗೂ ವಿವಿಧ ಹಂತದ ಪುರಸ್ಕಾರಗಳು ಹಾಗೂ ಅಭಿನಂದನಾ ಸಮಾರಂಭ ಮುಖ್ಯವಾಗಿವೆ. ಎಲ್ಲಾ ಜಿಲ್ಲೆಗಳೂ ಸಕ್ರಿಯವಾಗಿ ಮೇಲ್ಕಂಡ ಸಮಾವೇಶಗಳು ಹಾಗೂ ಪುರಸ್ಕಾರ ಸಮಾರಂಭದಲ್ಲಿ ಭಾಗವಹಿಸಲು ಆಶಿಸುತ್ತೇನೆ.

ಹೋದ ವರ್ಷಕ್ಕಿಂತಲೂ ಹೆಚ್ಚು ತರಬೇತಿ ಶಿಬಿರಗಳನ್ನು ಹಾಗೂ ಚಟುವಟಿಕೆಗಳನ್ನು ಎಲ್ಲಾ ಹಂತಗಳಲ್ಲಿ ಯಶಸ್ವಿಯಾಗಿ ಮಾಡುವಲ್ಲಿ ಸಂಸ್ಥೆಯ ಪದಾಧಿಕಾರಿಗಳು ಸಕ್ರಿಯವಾಗಿ ಪಾಲ್ಗೊಳ್ಳಬೇಕಾಗಿ ಮತ್ತೊಮ್ಮೆ ಪ್ರಾರ್ಥಿಸುತ್ತೇನೆ.

ಸ್ಕೌಟ್-ಗೈಡ್ ವಂದನೆಗಳೊಂದಿಗೆ

ತಮ್ಮ ವಿಶ್ವಾಸಿ

ಕೊಂಡಜ್ಜಿ ಬ. ಷಣ್ಮುಖಪ್ಪ

# ಪದ್ಮಭೂಷಣ ಡಾ. ರಾಜ್‌ಕುಮಾರ್ ಮರಳಿ ಮಣ್ಣಿಗೆ.....



ಕನ್ನಡಿಗರ ಆರಾಧ್ಯ ದೈವ, ವರನಟನಾಗಿ ಎಲ್ಲರ ಮನದಲ್ಲಿ ನೆಲೆಯೂರಿದ್ದ ಶ್ರೇಷ್ಠ ನಟ ಡಾ. ರಾಜ್‌ಕುಮಾರ್ ಅಸ್ತಂಗತರಾಗಿದ್ದಾರೆ. ರಾಜ್‌ಕುಮಾರ್ ಅಗಲಿಕೆ ಪ್ರತಿಯೊಬ್ಬ ಕನ್ನಡಿರಿಗೆ ನೋವನ್ನು ತಂದಿದೆ. ಕನ್ನಡ ಚಿತ್ರರಂಗಕ್ಕೆ ಆಧಾರ ಸ್ತಂಭವಾಗಿದ್ದ ನಟಸಾರ್ವಭೌಮ ಡಾ. ರಾಜ್‌ಕುಮಾರ್ ಕನ್ನಡ-ಕನ್ನಡಿಗರ ಕೀರ್ತಿ ಕಳಸ. ಡಾ. ರಾಜ್‌ಕುಮಾರ್ ಕೇವಲ ಚಿತ್ರ ನಟರಲ್ಲ, ಅವರೊಬ್ಬ ಕನ್ನಡಿಗರ ಸಾಂಸ್ಕೃತಿಕ ರಾಯಭಾರಿ; ಕನ್ನಡದ ಶಕ್ತಿ ಕೇಂದ್ರ. ಕರ್ನಾಟಕದ ನಾಡು-ನುಡಿಗಾಗಿ ಅವರ ಸೇವೆ ಅಪಾರ. ಜನಸಮೂಹವನ್ನು ಸೆಳೆಯುಬಲ್ಲ ಅಯಸ್ಕಾಂತ ಅವರಾಗಿದ್ದರು.

ರಾಜ್‌ರವರ ಮೊದಲ ಚಿತ್ರ "ಬೇಡರ ಕಣ್ಣಪ್ಪ" ದಿಂದ "ಶಬ್ದವೇದಿ" ವರೆಗೆ ಒಟ್ಟು 205 ಚಿತ್ರಗಳಲ್ಲಿ ನಟಿಸಿದ್ದು, ಬಹಳಷ್ಟು ಚಿತ್ರಗಳು ಅಪಾರ ಜನಪ್ರಿಯತೆ ಗಳಿಸಿದವು. ಚಿತ್ರ ರಂಗದಲ್ಲೇ ದಾಖಲೆಗಳನ್ನು ನಿರ್ಮಿಸಿದವು.

ಡಾ. ರಾಜ್‌ಕುಮಾರ್ ತಮ್ಮ ಪತ್ನಿ, ಪುತ್ರರು, ಪುತ್ರಿಯರು, ಮೊಮ್ಮಕ್ಕಳು ಹಾಗೂ ಅಪಾರ ಅಭಿಮಾನಿಗಳನ್ನು ಬಿಟ್ಟು ಹೋಗಿದ್ದಾರೆ. **ದಿವಂಗತ ಡಾ. ರಾಜ್‌ಕುಮಾರ್‌ರವರು ಅತ್ಯಮೂಲ್ಯವಾದ ತಮ್ಮೆರಡು ಕಣ್ಣುಗಳನ್ನು ಇಬ್ಬರು ಅಂಧರಿಗೆ ದಾನ ಮಾಡಿ ಸಾವಿನಲ್ಲಿ ಕೂಡ ಮೇರು ವ್ಯಕ್ತಿತ್ವ ಮೆರೆದಿದ್ದಾರೆ.** ದೈಹಿಕವಾಗಿ ನಮ್ಮಿಂದ ದೂರವಾದರೂ ಅವರು ತಮ್ಮ ಚಿತ್ರಗಳ ಮೂಲಕ ನಮ್ಮೆಲ್ಲರ ಹೃದಯಗಳಲ್ಲಿ ಚಿರಸ್ಥಾಯಿಯಾಗಿದ್ದಾರೆ. ನಾಡು ಒಬ್ಬ ಹೃದಯವಂತ ಸೌಜನ್ಯ ಮೂರ್ತಿ ವ್ಯಕ್ತಿಯನ್ನು ಕಳೆದುಕೊಂಡಿದೆ.

ಡಾ. ರಾಜ್‌ಕುಮಾರ್ ತಮ್ಮ ಶ್ರೇಷ್ಠ ಅಭಿನಯಕ್ಕಾಗಿ ಹಲವಾರು ಪ್ರಶಸ್ತಿ ಮತ್ತು ಪುರಸ್ಕಾರಗಳನ್ನು ನಾಡಿನ ಸಂಘ ಸಂಸ್ಥೆಗಳಿಂದ, ಕರ್ನಾಟಕ ಮತ್ತು ಭಾರತ ಸರ್ಕಾರದಿಂದ ಹಾಗೂ ಚಲನ ಚಿತ್ರರಂಗದಿಂದ ಪಡೆದಿದ್ದಾರೆ. 1973ರಲ್ಲಿ **ರಾಜ್ಯೋತ್ಸವ ಪ್ರಶಸ್ತಿ,** 1976ರಲ್ಲಿ ಮೈಸೂರು ವಿಶ್ವವಿದ್ಯಾಲಯದಿಂದ ಗೌರವ **ಡಾಕ್ಟರೇಟ್,** 1982ರಲ್ಲಿ ಅಮೇರಿಕಾದ ಅತ್ಯುನ್ನತ **ಕೆಂಟಕಿ ಕರ್ನಲ್** ಪ್ರಶಸ್ತಿ, 1987ರಲ್ಲಿ ಭಾರತ ಸರ್ಕಾರದ **ಪದ್ಮಭೂಷಣ,** 1992ರಲ್ಲಿ ಕರ್ನಾಟಕ ಸರ್ಕಾರದಿಂದ **ಕರ್ನಾಟಕ ರತ್ನ** ಹಾಗೂ 1995ರಲ್ಲಿ ಭಾರತ ಚಿತ್ರರಂಗಕ್ಕೆ ಅವರುನೀಡಿದ ಕೊಡುಗೆಗಾಗಿ **ದಾದಾಸಾಹೇಬ್ ಫಾಲ್ಕೆ** ಪ್ರಶಸ್ತಿ ಬಹುಮುಖ್ಯವಾದವುಗಳು.

ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಕರ್ನಾಟಕ ಘಟಕವು ಡಾ. ರಾಜ್‌ಕುಮಾರ್‌ರವರ ನಿಧನಕ್ಕೆ ಅಪಾರವಾದ ದುಃಖ ವ್ಯಕ್ತಪಡಿಸುತ್ತದೆ. ಅವರ ಸಾವಿನ ನೋವನ್ನು ತಡೆಯುವ ಶಕ್ತಿಯನ್ನು ಭಗವಂತ ಅವರ ಕುಟುಂಬ ವರ್ಗಕ್ಕೆ ನೀಡಲೆಂದು ಪ್ರಾರ್ಥಿಸುತ್ತೇವೆ.

# Regional Scout & Guide Integration Camp held at Besant Park

*The Bharat Scouts and Guides, National Headquarters, New Delhi Organised the Southern Regional Integration Camp for Scouts and Guides at the State Training Centre, Besant Park, Doddaballapur from 22nd to 26th March*




*2006. Nearly 230 Scouts and Guides from Karnataka, Kerala, Tamilnadu, North Eastern Railway attended the event. 41 Scouts and 3 Guides from Karnataka participated in the event.*

**Programmes and Activities :** *Presentation of Cultural items, Camp fire, Outing, Exhibition, Quiz Competition, youth programme, Discussions on various Topics, Peace March, Drawing and Painting competition were conducted during the event. Sri Kondajji B. Shanmukhappa, State Chief Commissioner, Bharat Scouts and Guides, Karnataka visited the Camp.*

*Miss. Suman Latha, Asst. Director, Southern Region and Sri Anoop Sarkar Regional Organising Commissioner (Scouts) Co-ordinated the Programme. Sri C. Subramanyam ALT(S), Sri A. Lakshman Dass, ALT (S), Miss Prema Mangalore, LT(G) & Smt. Bhuvaneshwari, DOC(G) from Karnataka attended the event.*

# Coastal Trekking Programme held at Mangalore

*The Bharat Scouts and Guides, National Headquarters, New Delhi Organised the Coastal Trekking Programme from 29th March to 2nd April 2006 at Mangalore and Bekal Fort. 110 Rovers and Rangers from 16 States attended the event 18 Rovers and Rangers from Karnataka participated in the event.*

*Sri. M.K. Jagadish Shenoy, Vice-President District Association, Bharat Scouts and Guides, inaugurated the event on 29th March 2006 at the premises of the District Association, Mangalore. Sri Suresh Kumar, Deputy Director of*



*Fisheries, Govt of Karnataka, Sri K. Ramesh, District Chief Commissions, Kasaragod District, were present. Sri I.A. Kairanna District Chief Commissioner, Dakshina Kannada District Presided over the Inaugural Function*

*The Coastal Trekking was from 29-03-2006 to 02-04-2006 and passed through Karnataka and Kerala State. The participants in the Trekking Programme enjoyed the environment along with the local hosputality provided to them at various places on the Trekking route.*

*The Rovers and Rangers visited old Fort, Kotepura, Adka, Uchila, Udayavar, Aila Uppala, Kasaragod, Bekal Bhagavathi, Niva, Shiriyar, Kumple.*

*Sri Anoop Sarkar, Regional organising commissioner (Scouts) was the Leader of the camp.*

*Mahajana Sanga Bengre, Tippu Sultan School, Uchila Bovi School, Kanvathirta Matt, Sri Sharada B.U.P. School, Mrs. & Mr. Sadanmanda, Sri Haji Mohammed Kunhi, Kumble School, Govt V.H. School for Girls, Press Reporters Supported and encouraged the participants and Provided accommodation, Boats Etc.,*

## THE BHARAT SCOUTS AND GUIDES, INDIA

### STRATEGIC PRIORITIES

1. YOUTH PROGRAMME - *To fulfill the needs and aspirations of young people by offering them attractive, innovative and challenging program through their involvement in decision making so as to make them responsible adults / citizen*
2. GROWTH - *To increase overall membership by 10% annually with the aim of strengthening the weaker sections.*
3. FINANCE - *To improve the Financial Status with optimum use of existing assets, exploring and developing new areas of finance generation*
4. ADULT RESOURCES - *To improve the competencies of adult leaders so that they can better serve the needs of the young people and the organization.*
5. MANAGEMENT - *To improve the overall organizational management of Bharat Scouts and Guides so as to be responsive to the changes in the environment.*
6. COMMUNICATION & PUBLIC RELATIONS - *To develop an effective and efficient communication System internally and externally to all levels and to enhance the image and visibility of Bharat Scouts & Guides.*

## • GONE HOME •

## Sri K.A. SOMANNA



*Sri K.A. Somanna, Asst. State Commissioner (Scouts) Mysore Division, Bharat Scouts & Guides, Karnataka passed away on 22nd April 2006 at 05.00 a.m. after a brief illness at his residence at Madikeri.*

*He is survived by his Wife, Two Sons, Four Daughters and grand Children. He Served the Bharat Scouts & Guides Movement for more than Six decades in different capacities in the Organisation. He served as District Commissioner (Scouts) & President, Bharat Scouts & Guides, District Association Madikere & Member of the National Council, New Delhi & Member of State Executive Committee for serveral years. He was aged about 88 years.*

*He started his career as Teacher at the Central High School, Madikeri and functioned As NCC Officer. He worked as District Commandant of Home Guards, Mercara and received the Certificate of Appreciation from the Government.*

*He was Awarded the Prestigious "SILVER ELEPHANT" the Highest National Award by the President of India during 1992 for the Distinguished and Meritorious services rendered by him to the Scout / Guide Movement and Kannada Rajyothsava Award during 1997 by Government of Karnataka.*

## Sri Surya Narayana Aithal

*Sri Surya Narayana Aithal, Member 15th Kanteerava Scout Group passed away on 8th Jar 2006 at Bangalore. He is survived by his Wife, One son & Two Daughters. He was a Member of Karnataka Mountainering Association. He was worked at I.T.I., Bangalore. He was a President Scout during 1969.*

# • GONE HOME •

## Sri S. AUDIKESAVALU



***Sri. S. Audikesavalu****, former State Organising Commissioner (Scouts) Bharat Scouts and Guides, Karnataka & Former Executive Director, National Headquarters, Bharat Scouts and Guides, New Delhi passed away on 4th April 2006 at the age of 70 after brief illness at Bangalore.*

*He is survived by his Wife and Two Daughters. He Served the Bharat Scouts & Guides, Karnataka for more than three decades in the organization. He was Awarded the Pestigious,* ***"Silver Elephant"*** *the Highest National Award by the President of India for the Meritorious Service rendered by him to the Movement. He Served as a Mamber of the National Executive Committee and National Council.*

## Sri M. GANGADHARAIAH

***Sri M. Gangadharaiah****, former president of District Central Co-op Bank, Chitradurga & Former Director, Karnataka State Co-op Apex Bank Ltd & Well Wisher of the Movement who supported for the Infrastructure Development Works at Kondajji Training Centre, Kondajji, passed away on 10th April 2006 at the age of 75 years after brief illness at Chitradurga. He is survived by his Wife One Son and One Daughter.*

*We pray God Almighty to give necessary Courage and Strength to this bereaved family members to bear this Irrepairable Loss.*

*We, the Members of the Bharat Scouts & Guides, Karnataka Join all of them in Praying for the Departed souls.*

***May their soul Rest in Peace.***

# INTERNATIONAL SEMINAR AT MALE (MALDIVES)

An International Seminar on Youth Programme Development was organized at Male (Maldives) between 17th and 21st of April, 2006 with a special focus on revitalizing the Rovering Section. Seventry five delegates from across the World participated in this Seminar. Dr. H. Madhava Bhat from Karnataka and Sri B. Mallayya Shastry from Andhra Pradesh represented Bharat Scouts and Guides, India.



The Indian delegates, Dr. H. Madhava Bhat & Sri B. Mallayya Shastry with the President of Maldives His Excellency Mahmoon Abdul Gayoom

The Seminar was inaugurated on 17th by none other than His Excellency President Mr. Mahmoon Abdul Gayoom himself. The Venue of the Seminar was Island Hotel, Hulhule.

The Programme also included Island Hopping, Educational Tour, Photo Flight, International Night, Visit to Island Villages all of which involved visits to various other venues stretched across other Island.

The Seminar proved to be a very useful exercise on the part of the World Bureau as Rovering Section needed an Impetus and a Clear Direction to make it both Popular and Valuable. There was a lot of sharing of success stories too.

Besides submitting a paper to the organizers on "Scouting - A.T.Q.M. Approach", Dr. Bhat actively participated in the deliberations that marked the entire seminar - cum - Workshop this richly contributing to the preparation of the revised draft. The responcibility of discussing the document was undertaken by the Asia Pacific Region. Mr. Adbulla Rasheed, the Regional Director was highly appreciative of Dr. Bhat's involvement and contribution to the success of the Seminar

# ಜಿಲ್ಲಾ ವಾರ್ತೆ



## ಬಳ್ಳಾರಿ ಜಿಲ್ಲೆ

ಬಳ್ಳಾರಿ ತಾಲ್ಲೂಕಿನ ಸ್ಕೌಟ್ಸ್ ಮತ್ತು ಗೈಡ್ಸ್‌ಗಳಿಗಾಗಿ ದಿನಾಂಕ : 5-4-2006 ರಿಂದ 8-4-2006ರ ವರೆಗೆ ರಾಜ್ಯ ಪುರಸ್ಕಾರ ತರಬೇತಿ ಶಿಬಿರವನ್ನು ಹಮ್ಮಿಕೊಳ್ಳಲಾಗಿತ್ತು. ಶ್ರೀ ಓಮೇಶ್ವರಯ್ಯ ನಾಯಕರಾಗಿದ್ದರು.

ಹೊಸಪೇಟೆ ಸ್ಕೌಟ್ಸ್ ಮತ್ತು ಗೈಡ್ಸ್‌ಗಳಿಗೆ ದಿನಾಂಕ : 10-04-2006 ರಿಂದ 14-4-2006ರ ವರೆಗೆ ರಾಜ್ಯ ಪುರಸ್ಕಾರ ತರಬೇತಿ ಶಿಬಿರವನ್ನು ಹಮ್ಮಿಕೊಳ್ಳಲಾಗಿತ್ತು. ಶ್ರೀ ಆರ್. ವೆಂಕಣ್ಣ ಜಿಲ್ಲಾ ಮುಖ್ಯ ಆಯುಕ್ತರು ಮತ್ತು ಶ್ರೀ ಎಸ್.ಡಿ. ಜೋಳದ್ ಜಿಲ್ಲಾ ಕಾರ್ಯದರ್ಶಿಗಳು ಎರಡು ಶಿಬಿರಗಳಿಗೆ ಭೇಟಿ ನೀಡಿದ್ದರು.

ಬಳ್ಳಾರಿಯಲ್ಲಿ ನಡೆದ ಪಲ್ಸ್ ಪೋಲಿಯೋ ಕಾರ್ಯಕ್ರಮದಲ್ಲಿ ಸ್ಕೌಟ್ಸ್ ಮತ್ತು ಗೈಡ್ಸ್‌ಗಳು 9-4-2006 ರಂದು ಭಾಗವಹಿಸಿದ್ದರು.

## ಬೆಂಗಳೂರು ಉತ್ತರ ಜಿಲ್ಲೆ

ಮಲ್ಲೇಶ್ವರ ಸ್ಥಳೀಯ ಸಂಸ್ಥೆಯ ನಿರ್ಮಲ ರಾಣಿ ಶಾಲೆಯ 75 ಗೈಡ್‌ಗಳು ರಾಮನಗರದ ಬಸವನಪುರ ಗ್ರಾಮದಲ್ಲಿ ನಡೆದ ಪ್ರಕೃತಿ ಅಧ್ಯಯನ ಶಿಬಿರದಲ್ಲಿ ಭಾಗವಹಿಸಿದ್ದರು. ಆ ಶಾಲೆಯ ಸ್ಕೌಟ್ ಮಾಸ್ಟರ್ ಹಾಗೂ ಗೈಡ್ ಕ್ಯಾಪ್ಟನ್‌ಗಳು ಸಹ ಭಾಗವಹಿಸಿದ್ದರು. ಜನರಲ್ ತಿಮ್ಮಯ್ಯ ಸಾಹಸ ಅಕಾಡೆಮಿ, ಯುವಜನ ಸೇವಾ ಮತ್ತು ಕ್ರೀಡಾ ಇಲಾಖೆಯವರ ಸಹಯೋಗದೊಂದಿಗೆ ಈ ಶಿಬಿರವನ್ನು ಆಯೋಜಿಸಲಾಗಿತ್ತು.

ಸಂಜೆ, ಚಾರಣ, ಬೆಟ್ಟ ಹತ್ತುವುದು, ನದಿ ದಾಟುವುದು, ಪಕ್ಷಿ ವೀಕ್ಷಣೆ, ತೆಪ್ಪ ನಡೆಸುವುದು, ಹಾವುಗಳ ಅಧ್ಯಯನ, ವನ್ಯ ಸಂಪತ್ತಿನ ಅಧ್ಯಯನ ಇವೇ ಮುಂತಾದ ಕಾರ್ಯಕ್ರಮಗಳನ್ನು ಈ ಶಿಬಿರದಲ್ಲಿ ಹಮ್ಮಿಕೊಳ್ಳಲಾಗಿತ್ತು.

## ಬೆಂಗಳೂರು ಗ್ರಾಮಾಂತರ ಜಿಲ್ಲೆ

ಕನಕಪುರ ತಾಲ್ಲೂಕಿನ ಸ್ಕೌಟ್ ಮಾಸ್ಟರ್ ಹಾಗೂ ಸಹ ಶಿಕ್ಷಕರಾದ ಶ್ರೀ ಸಂಗಯ್ಯ ಮಠಪತಿ ಇವರಿಗೆ "ಶ್ರೀ ಕೆಂಗಲ್ ಹನುಮಂತಯ್ಯ ಪ್ರಶಸ್ತಿ" ಯನ್ನು ದಿನಾಂಕ 7-4-2006 ರಂದು ನೀಡಲಾಯಿತು. ಶಿಕ್ಷಣ ಕ್ಷೇತ್ರದಲ್ಲಿ ಇವರು ಸಲ್ಲಿಸುತ್ತಿರುವ ಸೇವೆಯನ್ನು ಗುರ್ತಿಸಿ ಈ ಪ್ರಶಸ್ತಿಯನ್ನು ನೀಡಲಾಗಿದೆ.

## ತುಮಕೂರು ಜಿಲ್ಲೆ

ತುಮಕೂರಿನ ಸಂತ ಮೇರಿ ಶಾಲೆಯಲ್ಲಿ 'ಬನ್ನಿ ಟಮ್‌ಟೋಲಾ' ಅನ್ನು 13-3-2006 ರಂದು ಪ್ರಾರಂಭಿಸಲಾಯಿತು, ಕುಮಾರಿ ಛಾಯ, ಕು|| ಕಮಲ ಇವರುಗಳು ಮುಖ್ಯ ಅತಿಥಿಗಳಾಗಿದ್ದರು. ಶಾಲೆಯ ಮುಖ್ಯಸ್ಥರು, ಅಧ್ಯಾಪಕರುಗಳು ಕಾರ್ಯಕ್ರಮದಲ್ಲಿ ಉಪಸ್ಥಿತರಿದ್ದರು. ಈ ಟಮ್‌ಟೋಲಾದಲ್ಲಿ 100 ಮಂದಿ ಮಕ್ಕಳಿದ್ದಾರೆ.

## ಉಡುಪಿ ಜಿಲ್ಲೆ

ದಿನಾಂಕ 31-3-2006 ರಿಂದ 7-4-2006ರ ತನಕ ಉಡುಪಿ ಜಿಲ್ಲಾ ಸಂಸ್ಥೆಯು, ಸ್ಕೌಟ್, ಗೈಡ್ ಮತ್ತು ಕಬ್ ಶಿಕ್ಷಕ ಶಿಕ್ಷಕಿಯರ ಮುಂದುವರಿದ ತರಬೇತಿ ಶಿಬಿರವನ್ನು ಗಂಗೊಳ್ಳಿಯ ಸಂತ ಜೋಸೆಫರ ಹಿರಿಯ ಪ್ರಾಥಮಿಕ ಶಾಲೆಯಲ್ಲಿ ಸಂಘಟಿಸಿತ್ತು. ಶಿಬಿರವನ್ನು ಕುಂದಾಪುರ ಕ್ಷೇತ್ರ ಶಿಕ್ಷಣಾಧಿಕಾರಿ, ಶ್ರೀ ರಾಮ ಮೊಗೇರ ಜ್ಯೋತಿ ಬೆಳಗಿ ಉದ್ಘಾಟಿಸಿ ಶುಭ ಹಾರೈಸಿದರು. ಶಿಬಿರ ನಾಯಕರಾಗಿ ಸ್ಕೌಟ್ ವಿಭಾಗಕ್ಕೆ ಶ್ರೀ ಜಿಮ್ಮಿ ಸಿಕ್ವೇರಾ ಎ.ಎಲ್.ಟಿ.(ಎಸ್) ಕಬ್ ವಿಭಾಗಕ್ಕೆ ಜುಲಿಯಾನಾ ಲಸ್ರಾದೋ, ಗೈಡ್ ವಿಭಾಗಕ್ಕೆ ಕುಮಾರಿ ಜಯಶ್ರೀ ಸಹಕರಿಸಿದ್ದರು. ಸಂಪನ್ಮೂಲ ವ್ಯಕ್ತಿಗಳಾಗಿ ಶ್ರೀ ಸದಾಶಿವಭಟ್, ಶ್ರೀ ಆನಂದ ಅಡಿಗ, ಶ್ರೀ ಕೊಗ್ಗ ಗಾಣಿಗ, ಶ್ರೀ ಜಯಕರ ಶೆಟ್ಟಿ, ಸುಕುಮಾರ ಹೆಗ್ಡೆ, ಶ್ರೀಮತಿ ದಯಮಂತಿ, ಕುಮಾರಿ ವನಿತಾ, ಸಿ|| ಬಿಬಿಯಾನ ಕಾರ್ಯನಿರ್ವಹಿಸಿದ್ದರು.

ಸಮಾರೋಪ ಸಮಾರಂಭವು ಶ್ರೀ ಎಡ್ವಿನ್ ಆಳ್ವ ಜಿಲ್ಲಾ ಆಯುಕ್ತರು ಇವರ ಅಧ್ಯಕ್ಷತೆಯಲ್ಲಿ ನಡೆದು, ತಾಲ್ಲೂಕು ದೈಹಿಕ ಶಿಕ್ಷಣ ಸಂಯೋಜಕ ಶ್ರೀ ದಿನಕರ ಹೆಗ್ಡೆ ಸಮಾರೋಪ ಭಾಷಣ ಮಾಡಿದರು. ಹಿರಿಯ ಸ್ಕೌಟರ್ ಬಿ.ಜಿ. ವಾರಂಬಳ್ಳಿ ಮಾಹಿತಿ ನೀಡಿದ್ದು ಶಿಬಿರದ ವರದಿ ನಾಯಕ ಜಿಮ್ಮಿ ಸಿಕ್ವೇರಾ ಓದಿದ್ದು ಶಿಬಿರಾರ್ಥಿಗಳ ಪರ ಶ್ರೀಮತಿ ರೇವತಿ, ಶ್ರೀಮತಿ ಪುಷ್ಪಾ ಹಾಗೂ ಶ್ರೀ ರಾಮಕೃಷ್ಣ ಭಟ್ಟ ತಮ್ಮ ಅನುಭವ ತಿಳಿಸಿದರು.

ಕಾರ್ಯದರ್ಶಿ ಶ್ರೀ ಚಂದ್ರಶೇಖರ ಹೊಳ್ಳ ಸ್ವಾಗತಿಸಿ ತರಬೇತಿ ಆಯುಕ್ತ ಶ್ರೀ ಕೊಗ್ಗ ಗಾಣಿಗ ವಂದಿಸಿದ ಈ ಕಾರ್ಯಕ್ರಮವನ್ನು ಸಂಘಟನಾ ಆಯುಕ್ತ ಶ್ರೀ ಆನಂದ ಅಡಿಗ ನಿರ್ವಹಿಸಿದ್ದರು.

## ದಕ್ಷಿಣ ಕನ್ನಡ ಜಿಲ್ಲೆ

**ಗೈಡ್ಸ್ ಮತ್ತು ಬುಲ್‌ಬುಲ್ಸ್ ಶಿಕ್ಷಕಿಯರ ಅಡ್ವಾನ್ಸ್ಡ್ ತರಬೇತಿ ಶಿಬಿರ :** ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ದಕ್ಷಿಣ ಕನ್ನಡ ಜಿಲ್ಲಾ ಸಂಸ್ಥೆಯ ವತಿಯಿಂದ ಗೈಡ್ಸ್ ಮತ್ತು ಬುಲ್‌ಬುಲ್ ಶಿಕ್ಷಕಿಯರ ಅಡ್ವಾನ್ಸ್ಡ್ ತರಬೇತಿ ಶಿಬಿರವನ್ನು ದಿನಾಂಕ 17-04-2006 ರಿಂದ 24-04-2006ರ ವರೆಗೆ ಜಿಲ್ಲಾ ಸ್ಕೌಟ್ಸ್-ಗೈಡ್ಸ್ ತರಬೇತಿ ಕೇಂದ್ರ ಪಿಲಿಕುಳ ಮಂಗಳೂರು ಇಲ್ಲಿ ಸಂಘಟಿಸಲಾಯಿತು.

ಶಿಬಿರದ ಉದ್ಘಾಟನಾ ಸಮಾರಂಭವು ಜಿಲ್ಲಾ ಮುಖ್ಯ ಆಯುಕ್ತರು ಶ್ರೀ ಐ.ಎ. ಕೈರನ್ನರವರ ಅಧ್ಯಕ್ಷತೆಯಲ್ಲಿ ಜರುಗಿತು. ಜಿಲ್ಲಾ ಆಯುಕ್ತರು (ಗೈಡ್ಸ್) ಶ್ರೀಮತಿ ಐರಿನ್ ಡಿ'ಕುನ್ಹ ದೀಪ ಬೆಳಗಿಸಿ ಶಿಬಿರವನ್ನು ಉದ್ಘಾಟಿಸಿದರು. ಜಿಲ್ಲಾ ತರಬೇತಿ ಆಯುಕ್ತರು (ಗೈಡ್ಸ್) ಶ್ರೀಮತಿ ಸುಫಲ ಜಿಲ್ಲಾ ಜಂಟಿ ಕಾರ್ಯದರ್ಶಿ, ವೀರಾ ಫೆರ್ನಾಂಡಿಸ್, ಸುನೀತಾ ಎಎಲ್‌ಟಿ(ಜಿ) ವಿಮಲಾ ಎಎಲ್‌ಟಿ(ಬಿ), ಎಂ. ಪ್ರಭಾಕರ ಭಟ್ ಎಎಸ್‌ಒಸಿ(ಎಸ್), ಹಸನ ಸಾಹೇಬ್ ಉಪಸ್ಥಿತರಿದ್ದರು.

ಗೈಡ್ಸ್ ಅಡ್ವಾನ್ಸ್ಡ್ ತರಬೇತಿ ಶಿಬಿರದ ನಾಯಕಿಯಾಗಿ ಸುಫಲ, ಬುಲ್‌ಬುಲ್ಸ್ ತರಬೇತಿಯ ನಾಯಕಿಯಾಗಿ ಶ್ರೀಮತಿ ವಿಮಲಾ ಬಾಯಿಯವರು ಕರ್ತವ್ಯ ನಿರ್ವಹಿಸಿದರು. ಗೈಡ್ಸ್ ತರಬೇತಿಯಲ್ಲಿ 13 ಶಿಬಿರಾರ್ಥಿಗಳು ಬುಲ್‌ಬುಲ್ಸ್ ತರಬೇತಿಯಲ್ಲಿ 12 ಶಿಬಿರಾರ್ಥಿಗಳು ಭಾಗವಹಿಸಿದ್ದಾರೆ.

# ಸ್ಕೌಟ್ ಮಾಸ್ಟರ್

ಮೂಲ : **ಲಾರ್ಡ್ ಬೇಡನ್ ಪೊವೆಲ್**

ಭಾವಾನುವಾದ : **ಗೊ.ರು. ಚನ್ನಬಸಪ್ಪ**

**ಸ್ಕೌಟ್** ಮಾಸ್ಟರ್ ಆಗಬೇಕೆನ್ನುವವರಿಗೆ ಮೊದಲು ಒಂದು ಸಮಾಧಾನದ ಮಾತು : ಯಶಸ್ವಿ ಸ್ಕೌಟ್ ಮಾಸ್ಟರ್ ಆಗಬೇಕಾದ ವ್ಯಕ್ತಿ ಎಲ್ಲರೂ ಮೆಚ್ಚುವಂತಹ ಓರ್ವ ಸರ್ವಜ್ಞನಾಗಿರಬೇಕೆಂದಿರುವ ಸಾಮಾನ್ಯ ತಪ್ಪು ಕಲ್ಪನೆಯನ್ನು ನಾನು ವಿರೋಧಿಸಲಿಚ್ಛಿಸುತ್ತೇನೆ. ವಾಸ್ತವವಾಗಿ ಅದು ಅಲ್ಲವೇ ಅಲ್ಲ.

ಅವನು ಕೇವಲ ಓರ್ವ ಹಿರಿಯ ಬಾಲ ಚಮೂ ಅಂದರೆ :

1. ಅವನಲ್ಲಿ ಬಾಲ ಚಮೂವಿನ ಉತ್ಸಾಹವಿರಬೇಕು ಮತ್ತು ಮೊದಲ ಹೆಜ್ಜೆಯಾಗಿ, ಅವನು ತನ್ನ ಬಾಲಕರೊಂದಿಗೆ ತನ್ನ ಸರಿಯಾದ ಸ್ಥಾನ ಮಾನವನ್ನು ಉಳಿಸಿಕೊಂಡು ಬರಲು ಸಮರ್ಥನಾಗಿರಬೇಕು.
2. ಬೇರೆ ಬೇರೆ ವಯಸ್ಸಿನ ಬಾಲ್ಯ ಜೀವನದ ಅಗತ್ಯಗಳು, ಮನೋಭಾವಗಳು ಮತ್ತು ಅಪೇಕ್ಷೆಗಳನ್ನು ಅರ್ಥಮಾಡಿಕೊಳ್ಳಬೇಕು.
3. ಅವನು ಸಮೂಹಕ್ಕಿಂತ ಮಿಗಿಲಾಗಿ, ವೈಯಕ್ತಿಕ ಬಾಲ ಚಮೂವಿನೊಡನೆ ವ್ಯವಹರಿಸಬೇಕು.
4. ಅತ್ಯುತ್ತಮ ಫಲಿತಾಂಶವನ್ನು ಪಡೆಯಲು ತನ್ನ ಬಾಲಕರಲ್ಲಿ ಒಂದು ಸಾಂಘಿಕ ಹುರುಪನ್ನು ಉತ್ತೇಜಿಸಬೇಕು.

**ಮೊದಲ** ಅಂಶಕ್ಕೆ ಸಂಬಂಧಿಸಿದಂತೆ ಹೇಳುವುದಾದರೆ, ಸ್ಕೌಟ್ ಮಾಸ್ಟರನು ಶಾಲಾ ಉಪಾಧ್ಯಾಯನಾಗಲೀ, ಸೈನ್ಯದ ಅಧಿಕಾರಿಯಾಗಲೀ ಆಗಬೇಕಾಗಿಲ್ಲ; ಅಥವಾ ಧರ್ಮಾಧಿಕಾರಿಯಾಗಲೀ, ಶಿಕ್ಷಕನಾಗಲೀ ಆಗಬೇಕಾಗಿಲ್ಲ. ಒಟ್ಟಿನಲ್ಲಿ ಬೇಕಾಗಿರುವುದು ಹೊರ ಜಗತ್ತಿನಲ್ಲಿ ನಲಿಯುವ, ಹುಡುಗರ ಆಕಾಂಕ್ಷೆಗಳನ್ನು ಅರಿಯಲು ಸಾಮರ್ಥ್ಯ ಮತ್ತು ಸಂಕೇತ ಸೂಚನೆ (Signalling) ಇರಲಿ, ರೇಖನ ಕಲೆ (Drawing) ಇರಲಿ, ಅಥವಾ ಪ್ರಕೃತಿ ಪಾಠ (Nature Study) ಇರಲಿ, ಮಾರ್ಗದರ್ಶನ (Pioneering) ಆಟವಿರಲಿ ಹುಡುಗರಿಗೆ ಅಗತ್ಯ ಮಾರ್ಗದಲ್ಲಿ ಶಿಕ್ಷಣ ಕೊಡುವಂತಹ ವ್ಯಕ್ತಿಗಳನ್ನು ಕಂಡು ಕೊಳ್ಳುವ ಶಕ್ತಿ.

ಅವನು ಸ್ವಯಂ ಹಿರಿಯಣ್ಣನ ಸ್ಥಾನವನ್ನು ಗಳಿಸಿಕೊಳ್ಳಬೇಕು. ಅಂದರೆ, ಹುಡುಗರ ದೃಷ್ಟಿಕೋನದಿಂದ ವಿಚಾರ ಮಾಡುವುದು ಮತ್ತು ಸರಿಯಾದ ಮಾರ್ಗದಲ್ಲಿ ಅವರನ್ನು ಕರೆದೊಯ್ದು, ಮಾರ್ಗದರ್ಶನ ಮಾಡಿ, ಅವರಲ್ಲಿ ಉತ್ಸಾಹ ತುಂಬುವುದು. ನಿಜವಾದ ಹಿರಿಯಣ್ಣನಂತೆ, ಸ್ಕೌಟ್ ಕುಟುಂಬದ ಸಂಪ್ರದಾಯಗಳನ್ನು ಅರ್ಥಮಾಡಿಕೊಂಡು, ಗಣನೀಯ ಅಚಲತೆ ಅಗತ್ಯವಾದರೂ ಆ ಸಂಪ್ರದಾಯಗಳು ರಕ್ಷಣೆಯಾಗುವಂತೆ ನೋಡಿಕೊಳ್ಳಬೇಕು. ಅಷ್ಟಾದರೆ ಸಾಕು. ಚಳುವಳಿಯು ಒಂದು ಹರ್ಷದಾಯಕ ಸಂಘಟನೆ, ಇದು ಇಷ್ಟು ಹರ್ಷದಾಯಕವೇಕೆಂದರೆ, 'ಸ್ಕೌಟಿಂಗ್ ಆಟ'ದಲ್ಲಿ ನೀವು ಇತರರಿಗಾಗಿ ದೊಡ್ಡ ಕೆಲಸ ಮಾಡುತ್ತೀರಿ; ಸ್ವಾರ್ಥತೆಯ ಸಂತಾನದ ವಿರುದ್ಧ ಹೋರಾಡುತ್ತೀರಿ.

**ಎರಡನೆಯ** ಅಂಶದ ಬಗ್ಗೆ ನಾನಾ ಕಿರು ಪುಸ್ತಕಗಳು ತಾರುಣ್ಯ ಜೀವನದ ಅನುಕ್ರಮ ಅವಸ್ಥೆಗಳನ್ನು ತಿಳಿಸುತ್ತವೆ.

**ಮೂರನೆಯದಾಗಿ** ಗುಂಪಿನ ಪ್ರತಿಯೊಬ್ಬ ಹುಡುಗನನ್ನು ಪ್ರತ್ಯೇಕವಾಗಿ ಗುರುತಿಸಿ, ಅವನಲ್ಲಿ ಯಾವ ಶಕ್ತಿ ಇದೆಯೆಂಬುದನ್ನು ಕಂಡುಕೊಂಡು, ಒಳ್ಳೆಯ ಶಕ್ತಿಯನ್ನು, ಗ್ರಹಿಸಿ, ಅವನಲ್ಲಿರುವ ಕೆಟ್ಟ ಗುಣಗಳನ್ನು ಹೊರ ಹಾಕುವಂತೆ ಆ

ಒಳ್ಳೆಯ ಶಕ್ತಿಯನ್ನು ವಿಕಾಸಗೊಳಿಸುವುದು ಸ್ಕೌಟ್ ಮಾಸ್ಟರನ ಕೆಲಸ. ಇದು ನಿಜಕ್ಕೂ ಅತ್ಯಂತ ಆಸಕ್ತಿಯ ವಿಷಯ. ಸಾಮಾನ್ಯವಾಗಿ ಅತಂತ್ಯ ಕೆಟ್ಟ ಗುಣಗಳ ವ್ಯಕ್ತಿಯಲ್ಲೂ ಶೇಕಡ 5 ರಷ್ಟಾದರೂ ಒಳ್ಳೆಯ ಗುಣಗಳಿರುತ್ತವೆ. ಇದನ್ನು ಗುರುತಿಸಿ ಈ ಶೇಕಡ 5 ಅಂಶವನ್ನು ಶೇಕಡ 80 ಅಥವಾ 90 ಅಂಶವಾಗುವಂತೆ ಬೆಳೆಸುವುದೇ ಇರುವುದು. ಇದು ಎಳೆಯ ಮಕ್ಕಳಿಗೆ ತಿಳಿವಳಿಕೆಯಾಗುವುದಷ್ಟೇ ಅಲ್ಲ; ಅವರನ್ನು ತಿದ್ದಿದಂತಾಗುತ್ತದೆ.

**ನಾಲ್ಕನೆಯದು** ಸ್ಕೌಟ್ ತರಬೇತಿಯಲ್ಲಿ ದಳ (Patorl) ಅಥವಾ ತಂಡ (Gang) ವ್ಯವಸ್ಥೆಯು ವೈಯಕ್ತಿಕ ತರಬೇತಿಯ ಸಾಮೂಹಿಕ ಅಭಿವ್ಯಕ್ತಿಯನ್ನು ತೋರಿಸುತ್ತದೆ. ಇದು ಹುಡುಗನಿಗೆ ಹೇಳಿ ಕೊಟ್ಟಿದ್ದೆಲ್ಲವನ್ನೂ ಕೃತಿಗಿಳಿಸುತ್ತದೆ.

ಸರಿಯಾಗಿ ಬಳಸಿಕೊಂಡುದೇ ಆದರೆ, ದಳ ವ್ಯವಸ್ಥೆಯಲ್ಲಿ ಅತ್ಯಂತ ಅಸಾಧಾರಣ ತರಬೇತಿ ಮೌಲ್ಯವಿದೆ. ತನ್ನ ದಳದ ಒಳಿತಿಗೆ ನಿರ್ದಿಷ್ಟವಾದ ತನ್ನ ವೈಯಕ್ತಿಕ ಹೊಣೆಗಾರಿಕೆ ಇದೆಯೆಂಬುದನ್ನು ಅರ್ಥಮಾಡಿಕೊಳ್ಳಲು ಪ್ರತಿಯೊಬ್ಬ ಹುಡುಗನಿಗೂ ದಳವು ಮಾರ್ಗದರ್ಶಕವಾಗುತ್ತದೆ. ಆದರ ಮೂಲಕ, ಸ್ಕೌಟ್ ಮಾಸ್ಟರನು ತನ್ನ ಸ್ಕೌಟುಗಳ ನೈತಿಕ ಮನೋಭಾವನೆಗೆ ತಕ್ಕಂತೆ ತನ್ನ ಬೋಧನೆಯಷ್ಟೆ ಅಲ್ಲ; ಆಲೋಚನೆಗಳನ್ನೂ ನೀಡಲು ಸಾಧ್ಯವಾಗುತ್ತದೆ. ಅದರ ಮೂಲಕ ತಮ್ಮ ತಂಡಗಳು ಮಾಡುವ ಕೆಲಸದಲ್ಲಿ ತಮಗೂ ಅಭಿಪ್ರಾಯ ಕೊಡುವ ಗಣನೀಯ ಅವಕಾಶವಿದೆ ಎಂಬುದನ್ನು ಸ್ಕೌಟುಗಳು ಕ್ರಮೇಣ ತಿಳಿದುಕೊಳ್ಳುತ್ತಾರೆ. ಗುಂಪು (Troop) ಅಥವಾ ತಂಡವನ್ನು ರೂಪಿಸುವುದು ದಳದ (Patrol) ಪದ್ಧತಿ. ಆ ದೃಷ್ಟಿಯಿಂದ ಇಡೀ ಸ್ಕೌಟಿಂಗ್ ಒಂದು ಸಹಕಾರಿ ಪ್ರಯತ್ನವಾಗಿದೆ.

## ಸ್ಕೌಟ್ ಮಾಸ್ಟರನ ಕರ್ತವ್ಯ

ಸ್ಕೌಟ್ ಹುಡುಗನ ತರಬೇತಿಯ ಯಶಸ್ಸು ಬಹುಮಟ್ಟಿಗೆ ಸ್ವಯಂ ಸ್ಕೌಟ್ ಮಾಸ್ಟರನ ವೈಯಕ್ತಿಕ ಆದರ್ಶವನ್ನು ಅವಲಂಬಿಸಿದೆ. ಹುಡುಗನ ಹಿರಿಯಣ್ಣನಾಗುವಂತೆಯೇ ಮುಖಂಡನಾಗುವುದು ಸುಲಭ. ಏಕೆಂದರೆ ಹುಡುಗನಲ್ಲಿ ನಾಯಕ ನಿಷ್ಠೆ ಅಪಾರವಾಗಿರುತ್ತದೆ. ಇದನ್ನು ನಾವು ಬೆಳದಂತೆಲ್ಲ ಮರೆತು ಬಿಡುವುದು ಸ್ವಾಭಾವಿಕ.

ತನ್ನ ಹುಡುಗರಿಗೆ ಮುಖಂಡನಾದ ಸ್ಕೌಟ್ ಮಾಸ್ಟರನು, ಅವರ ಅಭಿವೃದ್ಧಿಗೆ ಒಂದು ಪ್ರಬಲವಾದ ಸನ್ನೆಕೋಲನ್ನು ಪಡೆದಿರುತ್ತಾನೆ. ಆದರೆ, ಅದೇ ವೇಳೆಯಲ್ಲಿ, ತನ್ನ ಮೇಲೆಯೇ ಹೆಚ್ಚು ಹೊಣೆಗಾರಿಕೆ ತಂದುಕೊಳ್ಳುತ್ತಾನೆ. ಗುಣವಿರಲಿ, ದೋಷವಿರಲಿ, ಸ್ಕೌಟ್ ಮಾಸ್ಟರಲ್ಲಿ ಕಂಡು ಬರುವ ಅತ್ಯಂತ ಸಣ್ಣ ಸ್ವಭಾವವನ್ನೂ ಗಮನಿಸುವಷ್ಟು ಹುಡುಗರು ಚುರುಕಾಗಿರುತ್ತಾರೆ. ಅವನ ನಡತೆಗಳು ಅವರವಾಗುತ್ತವೆ. ಅವನು ತೋರುವ ವಿಶ್ವಾಸ, ಅವನ ವೇದನೆ, ಅವನ ಉಲ್ಲಾಸ ಅಥವಾ ಅವನ ಅಸಹನೆಯ ನೋಟ, ಅವನ ದೃಢವಾದ ಸ್ವಯಂ ಶಿಸ್ತು ಅಥವಾ ಅವನಿಂದ ಆಗಾಗ ಸಂಭವಿಸುವ ನೈತಿಕ ತಪ್ಪುಗಳು - ಎಲ್ಲವೂ ಅವನ ಅನುಚರರಿಂದ ಅನುಸರಿಸಲ್ಪಡುತ್ತವೆ.

ಆದುದರಿಂದ, ಹುಡುಗರು ಸ್ಕೌಟ್ ಶಾಸನ ಮತ್ತು ಅದರಲ್ಲಿ ಅಡಗಿರುವ ಎಲ್ಲ ಸೂತ್ರಗಳನ್ನೂ ಪರಿಪಾಲಿಸುವಂತೆ ಮಾಡಲು, ಸ್ಕೌಟ್ ಮಾಸ್ಟರನು ಸ್ವತಃ ತನ್ನ ಜೀವನದಲ್ಲಿ ಸ್ಕೌಟ್ ಸೂತ್ರಗಳನ್ನು ಪರಿಪೂರ್ಣವಾಗಿ ಮತ್ತು ಕಟ್ಟುನಿಟ್ಟಾಗಿ ಪರಿಪಾಲಿಸಬೇಕು.

ಸ್ಕೌಟ್ ಮಾಸ್ಟರನ ಕೆಲಸ ಗಾಲ್ಫ್ (ಚಿಂಡಾಟ) ಆಟದಂತೆ ಅಥವಾ ನೊಣದಿಂದ ಮೀನು ಹಿಡುಯುವ ಕೆಲಸವಿದ್ದಂತೆ. ಸುಮ್ಮನೆ ಸ್ಥಿರವಾಗಿ ನಿಲ್ಲುವುದರಿಂದ ಪ್ರಯೋಜನವಿಲ್ಲ. ಪ್ರಗತಿ ಇರಲಿ ಅಥವಾ ವಿಶ್ರಾಂತಿಯಿರಲಿ ಒಂದಲ್ಲ ಒಂದು ಇರಬೇಕು. ಆದುದರಿಂದ ನಾವು ಮುಗುಳ್ನಗುತ್ತ ಮುಂದುವರಿಯೋಣ.

## ಚಳುವಳಿಗೆ ನಿಷ್ಠೆ

ತನ್ನ ಹುಡುಗರಿಗೆ ಸಲ್ಲಬೇಕಾದ ಕರ್ತವ್ಯದ ಜೊತೆಗೆ ಇಡೀ ಚಳುವಳಿಗೆ ಸಲ್ಲಿಸಬೇಕಾದ ಕರ್ತವ್ಯವೂ ಇದೆಯೆಂಬುದನ್ನು ಸ್ಕೌಟ್ ಮಾಸ್ಟರನು ಸದಾ ನೆನಪಿಲ್ಲಿಟ್ಟುಕೊಳ್ಳಬೇಕು. ಹುಡುಗರನ್ನು ಒಳ್ಳೆಯ ನಾಗರಿಕರನ್ನಾಗಿ ಮಾಡುವ ನಮ್ಮ ಉದ್ದೇಶ ಒಂದು ದೃಷ್ಟಿಯಿಂದ ರಾಷ್ಟ್ರದ ಲಾಭಕ್ಕಾಗಿ. ಅಂದರೆ, ದೇಶದಲ್ಲಿ ಆಂತರಿಕವಾಗಿ ಐಕ್ಯತೆಯಿಂದಿಡುವ ಮತ್ತು ನೆರೆಹೊರೆಯವರೊಡನೆ ಶಾಂತಿಯಿಂದಿರುವ ಸ್ನೇಹ ಹಾಗೂ ಕ್ರೀಡಾ ಮನೋಭಾವನೆಯು ಒಂದು ಪೌರುಷಯುಕ್ತ ವಿಶ್ವಾಸಾರ್ಹ ಜನಾಂಗವಿರಬೇಕೆಂಬುದೇ ನಮ್ಮ ಆಶಯ.

ಸ್ವಯಂ ತ್ಯಾಗ ಮತ್ತು ಶಿಸ್ತನ್ನು ಸ್ವತಃ ಪರಿಪಾಲಿಸುವ ಮೂಲಕ ಬೋಧಿಸುವ ಕರ್ತವ್ಯದ ಹೊಣೆ ಹೊತ್ತಿರುವ ಸ್ಕೌಟ್ ಮಾಸ್ಟರುಗಳು ಸಂಕುಚಿತವಾದ ವೈಯಕ್ತಿಕ ಭಾವನೆಗಳಿಂದ ದೂರವಿರಬೇಕು. ಮತ್ತು ತಮ್ಮ ಸ್ವಂತ ವೈಯಕ್ತಿಕ ಅಭಿಪ್ರಾಯಗಳನ್ನು ಸಮಷ್ಟಿಯ ಉನ್ನತ ನೀತಿಗೆ ಒಳಪಡಿಸುವಷ್ಟು ವಿಶಾಲ ಮನೋಭಾವವಿರಬೇಕು. ಹುಡುಗರಿಗೆ 'ಆಟ ಆಡಲು' ಕಲಿಸುವುದು ಅವರ ಕೆಲಸ. ಅಂದರೆ ತಾವೇ ಸ್ವಂತವಾಗಿ ಮಾಡುವ ಮೂಲಕ, ಗೋಡೆಯಲ್ಲಿನ ಇಟ್ಟಿಗೆಯಂತೆ, ಪ್ರತಿಯೊಬ್ಬ ಹುಡುಗನೂ ತನ್ನ ತನ್ನ ಸ್ಥಾನದಲ್ಲಿ ಕಲಿತುಕೊಳ್ಳುವಂತೆ ಮಾಡುವುದು. ಪ್ರತಿಯೊಬ್ಬರಿಗೂ, ಅವರಿಗಾಗಿ ನಿಗದಿ ಮಾಡಿದ ಕಾರ್ಯಕ್ಷೇತ್ರವಿರುತ್ತದೆ. ಅವನು ಆ.ಕೆಲಸಕ್ಕೆ ಎಷ್ಟು ಚೆನ್ನಾಗಿ ಗಮನ ಕೊಡುತ್ತಾನೋ, ಅಷ್ಟು ಚೆನ್ನಾಗಿ ಅವನ ಸ್ಕೌಟುಗಳು ಅವನು ನೀಡುವ ತರಬೇತಿಯಲ್ಲಿ ಆಸಕ್ತಿ ವಹಿಸುತ್ತಾರೆ. ಅಂದರೆ, ಚಳುವಳಿಯ ಉನ್ನತ ಗುರಿಗಳತ್ತ ಅಥವಾ ಹತ್ತು ವರ್ಷಗಳ ನಂತರದ ಪರಿಣಾಮದತ್ತ ನಾವು ದೃಷ್ಟಿಯಿಟ್ಟುಕೊಳ್ಳಬೇಕು. ಅದರಿಂದ ಮಾತ್ರ ಇಂದಿನ ಕಾರ್ಯದ ಮೌಲ್ಯವನ್ನು ಯೋಗ್ಯ ಪ್ರಮಾಣದಲ್ಲಿ ಕಾಣಲು ಸಾಧ್ಯ.

ಎಲ್ಲಿ ಒಬ್ಬ ವ್ಯಕ್ತಿ ತನ್ನ ಆತ್ಮ ಪೂರ್ವಕವಾಗಿ ಅಗತ್ಯ ಮಾರ್ಗವನ್ನು ಅನುಸರಿಸಲಾಗುವುದಿಲ್ಲವೋ ಅಲ್ಲಿ, ಅವನಿಗಿರುವ ಒಂದು ಯೋಗ್ಯ ಮಾರ್ಗವೆಂದರೆ, ಅದನ್ನು ನೇರವಾಗಿ ತನ್ನ ಕಮಿಷನರ್ ಅಥವಾ ಕೇಂದ್ರ ಕಾರ್ಯಾಲಯಕ್ಕೆ ತಿಳಿಸುವುದು ಮತ್ತು ಅವನ ಅಭಿಪ್ರಾಯವನ್ನು ಆ ಮೇಲ್ಪಟ್ಟವರು ಅರ್ಥ ಮಾಡಿಕೊಳ್ಳದಿದ್ದರೆ ಆ ಕೆಲಸವನ್ನು ಕೈಬಿಡುವುದು. ಮೊದಲು ತೆರೆದ ಹೃದಯದಿಂದ ಆ ಕೆಲಸಕ್ಕೆ ಹೋಗಿ, ನಂತರ, ಅದರ ವಿವರಗಳು ತನಗೆ ಸರಿಹೊಂದಲಿಲ್ಲವೆಂಬ ಕಾರಣದಿಂದ ಅದು ಕಾರ್ಯನಿರ್ವಾಹಕರ ತಪ್ಪೆಂದು ಅವನು ದೂರಿದರೆ ಅದು ಸೂಕ್ತವಲ್ಲ.

ಅದೃಷ್ಟವಶಾತ್, ವಿಕೇಂದ್ರೀಕರಣ ಹಾಗೂ ಸ್ಥಳೀಯ ಅಧಿಕಾರಿಗಳಿಗೆ ಸ್ವಾತಂತ್ರ್ಯ ಕೊಡುವ ಮೂಲಕ, ನಮ್ಮ ಚಳುವಳಿಯಲ್ಲಿ ಇತರ ಅನೇಕ ಸಂಸ್ಥೆಗಳಲ್ಲಿ ಕಿರುಕುಳ ಮತ್ತು ದೂರಗಳಿಗೆ ಕಾರಣವಾಗಿರುವ ವಿಳಂಬವನ್ನು ಮಾತ್ರ ನಾವು ಬಹಳ ಮಟ್ಟಿಗೆ ತಪ್ಪಿಸುತ್ತೇವೆ.

ನಮ್ಮಲ್ಲಿ, ಇಡೀ ಚಳುವಳಿಯ ಬಗ್ಗೆ ತಮ್ಮ ದೃಷ್ಟಿ ಮತ್ತು ನಿಷ್ಠೆ ಎರಡರಲ್ಲೂ ವಿಶಾಲ ಮನೋಭಾವನೆಯನ್ನು ಹೊಂದಿರುವ ಸ್ಕೌಟ್ ಮಾಸ್ಟರುಗಳ ಒಂದು ಸಮೂಹವೇ ಇರುವುದು ನಮ್ಮ ಅದೃಷ್ಟ.

## ಸ್ಕೌಟ್ ಮಾಸ್ಟರನ ಪ್ರತಿಫಲ

ಒಮ್ಮೆ ಒಬ್ಬ ವ್ಯಕ್ತಿ. 'ಪ್ರಪಂಚದಲ್ಲಿ ತಾನೇ ಅತ್ಯಂತ ಸುಖಿ' ಎಂದು ನನಗೆ ಹೇಳುವ ಧೈರ್ಯ ಮಾಡಿದ! ಆಗ ನಾನು, ಅವನಿಗಿಂತ ಸುಖಿಯಾಗಿರುವ ಒಬ್ಬ ವ್ಯಕ್ತಿಯ ಅಂದರೆ 'ನನ್ನ' ವಿಷಯ ಹೇಳಬೇಕಾಯಿತು.

ಈ ಸುಖವನ್ನು ಪಡೆಯುವಲ್ಲಿ ನಮ್ಮಿಬ್ಬರಲ್ಲಿ ಯಾರೂ ಎಂದೂ ಕಷ್ಟಗಳನ್ನು ಎದುರಿಸಲಿಲ್ಲವೆಂದು ನೀವು ಊಹಿಸಬೇಕಾದ ಆಗತ್ಯವೇ ಇಲ್ಲ. ನಮ್ಮಿಬ್ಬರ ಅನುಭವ ಅದಕ್ಕೆ ತದ್ವಿರುದ್ಧ.

ನಾವು ಯಶಸ್ವಿಯಾಗಿ ಕಷ್ಟ ನಷ್ಟಗಳನ್ನು ಎದುರಿಸಿದಾಗ ಮತ್ತು ಕಿರುಕುಳಗಳನ್ನು ಸಹಿಸಿದಾಗ ಉಂಟಾಗುವ ತೃಪ್ತಿಯೇ ಅವುಗಳನ್ನು ದಾಟಿದ ಆನಂದಕ್ಕೆ ಪೂರ್ಣತೆ ತಂದುಕೊಡುತ್ತದೆ.

ನಿಮ್ಮ ಜೀವನವನ್ನು ಹೂವಿನ ಹಾಸಿಗೆಯಾಗಬೇಕೆಂದು ನಿರೀಕ್ಷಿಸಬೇಡಿ. ಅದು ಹಾಗಾದರೆ ಅದರಲ್ಲಿ ಸ್ವಾರಸ್ಯವೇ ಇರುವುದಿಲ್ಲ.

ಆದ್ದರಿಂದ ಸ್ಕೌಟ್‌ಗಳೊಡನೆ ವ್ಯವಹರಿಸುವಾಗ ನೀವು ಆಶಾಭಂಗ ಮತ್ತು ಹಿಂಜರಿತಗಳನ್ನು ಎದುರಿಸಬೇಕಾಗುತ್ತದೆ. ತಾಳ್ಮೆಯಿಂದಿರಿ : ಹೆಚ್ಚು ಜನ, ತಮ್ಮ ಕೆಲಸ ಅಥವಾ ಜೀವನವನ್ನು ಕುಡಿತ ಅಥವಾ ದುರಭ್ಯಾಸಗಳಿಗಿಂತ ಹೆಚ್ಚಾಗಿ ತಾಳ್ಮೆಯ ಕೊರತೆಯಿಂದ ಹಾಳು ಮಾಡಿಕೊಳ್ಳುತ್ತಾರೆ. ನೀವು ಕೆಲಮಟ್ಟಿಗೆ ಕಿರುಕುಳದ ಟೀಕೆಗಳು ಮತ್ತು ವಿಳಂಬದ ಬಂಧನಗಳನ್ನು ತಾಳ್ಮೆಯಿಂದ ಸಹಿಸಿಕೊಳ್ಳಬೇಕಾಗುತ್ತದೆ. ಆದರೆ, ನಿಮ್ಮ ತಾಳ್ಮೆಗೆ ಪ್ರತಿಫಲ ಬಂದೇ ಬರುತ್ತದೆ.

ಸ್ವಂತ ತ್ಯಾಗದಿಂದ ಕರ್ತವ್ಯ ನಿರ್ವಹಿಸಲು ಮಾಡುವ ಪ್ರಯತ್ನದಿಂದ ಮತ್ತು ಹುಡುಗರಲ್ಲಿ ಅವರ ಜೀವನಕ್ಕೆ ವಿಶಿಷ್ಟವಾದ ಸ್ಥಾನಮಾನವನ್ನು ಕೊಡುವಂತಹ ಸದ್ಗುಣಗಳನ್ನು ಬೆಳೆಸುವುದರಿಂದ ಬರುವ ತೃಪ್ತಿ ಅನಿರ್ವಚನೀಯವಾದುದು. ಅದು ಬರವಣಿಗೆಯಲ್ಲಿ ಬರೆದು ತೋರಿಸಲಾಗದಂತಹ ವಿಶಿಷ್ಟ ಪ್ರತಿಫಲವನ್ನು ತಂದು ಕೊಡುತ್ತದೆ!

ಅವಕಾಶ ಕೊಟ್ಟರೆ, ನಮ್ಮ ಯುವ ಜನಾಂಗವನ್ನು ಅನತಿ ಕಾಲದಲ್ಲೇ ಕೆಡಿಸುವಂತಹ ಕೇಡುಗಳು ಮತ್ತೆ ತಲೆದೋರದಂತೆ ತಡೆಗಟ್ಟಲು ಮಾಡಿದ ಪ್ರಯತ್ನವು ವ್ಯಕ್ತಿಗೆ, ತನ್ನ ಸ್ಥಾನ ಎಷ್ಟೇ ದೀನವಾಗಿರಲಿ, ತನ್ನ ಸೇವೆ ಎಷ್ಟೇ ಅಲ್ಪ ಪ್ರಮಾಣದ್ದಾಗಿರಲಿ, ತನ್ನಿಂದ ರಾಷ್ಟ್ರಕ್ಕಾಗಿ ಸ್ವಲ್ಪವಾದರೂ ಸೇವೆ ಸಂದಿದೆಯೆಂಬ ಪೂರ್ಣ ತೃಪ್ತಿಯನ್ನು ನೀಡುತ್ತದೆ.

'ಸ್ಕೌಟರ್' ಎಂಬ ಶಬ್ದವು ವಿವರಿಸುವ ಸ್ಕೌಟ್ ಮಾಸ್ಟರ್ ಕಮಿಷನರ್, ಕಮಿಟಿ ಸದಸ್ಯ, ಶಿಕ್ಷಕ, ವ್ಯವಸ್ಥಾಪಕ, ಕಾರ್ಯದರ್ಶಿ ಎಲ್ಲರೂ ಈ ಭಾವನೆಯಿಂದ 'ಬಾಯ್ ಸ್ಕೌಟ್' ಚಳುವಳಿಯಲ್ಲಿ ಕೆಲಸ ಮಾಡಬೇಕು.

ಸ್ಕೌಟ್ ಚಳುವಳಿಯ ಸಂಘಟನೆ ಮತ್ತು ಪ್ರಸಾರದ ಕೀರ್ತಿ ನಮ್ಮ ಸ್ವಯಂ ಸೇವಕರ ದಳಕ್ಕೆ ಸಲ್ಲಬೇಕು. ಅನೇಕ ರಾಷ್ಟ್ರಗಳ ಮಣ್ಣಿನಡಿಯಲ್ಲಿ, ಅದು ಮೌನವಾಗಿದ್ದರೂ, ಉಜ್ವಲವಾಗಿರುವ ರಾಷ್ಟ್ರ ಪ್ರೇಮದ ಗಮನಾರ್ಹ ಸಾಕ್ಷಿ ನಮಗಿದೆ. ಈ ಜನರು ಸ್ಕೌಟ್ ಹುಡುಗರ ತರಬೇತಿ ವ್ಯವಸ್ಥೆಯ ಕಾರ್ಯಕ್ಕೆ ತಮ್ಮ ಕಾಲ, ಶಕ್ತಿ ಮತ್ತು ಅನೇಕ ಸಂದರ್ಭಗಳಲ್ಲಿ ತಮ್ಮ ಹಣವನ್ನೂ ಸಹ ನೀಡುತ್ತಾರೆ. ತಮ್ಮ ಕೆಲಸಕ್ಕೆ ಯಾವುದೇ ಪ್ರತಿಫಲ ಅಥವಾ ಪ್ರಶಂಸೆಯ ದೃಷ್ಟಿಯಿಲ್ಲದೆ ದುಡಿಯುತ್ತಾರೆ. ಅವರು ತಮ್ಮ ದೇಶ ಮತ್ತು ತಮ್ಮ ಜನಾಂಗದ ಪ್ರೇಮಕ್ಕಾಗಿ ಆ ಸೇವೆ ಸಲ್ಲಿಸುತ್ತಾರೆ.

(ಬಾಯ್ ಸ್ಕೌಟ್ ಚಳುವಳಿಯ ಜನಕ ಲಾರ್ಡ್ ಬೇಡೆನ್ ಪೊವೆಲ್ ಆಫ್ ಗಿಲ್ ವೆಲ್ ಅವರ "Aids to scout-Mastership" ಎಂಬ ಕೃತಿಯ "Scout-master" ಎಂಬ ಅಧ್ಯಾಯದ ಭಾವಾನುವಾದ)

# ಸ್ಕೌಟ್ / ಗೈಡ್ ಎಂದರೆ.....

## ಜೀವನ ಶಿಕ್ಷಣ

ಶಾಲೆ ಮತ್ತು ಮನೆ ಇವೆರಡೂ ಪೂರೈಸಲಾಗದ ಅಗತ್ಯಗಳನ್ನು ಪೂರೈಸಿರುವ ಸ್ಕೌಟ್ ಶಿಕ್ಷಣವು ಯುವಜನಾಂಗಕ್ಕೆ ಅವರೆಡಕ್ಕೂ ಪೂರಕವಾಗಿರುತ್ತದೆ. ಸ್ಕೌಟ್ ಸ್ವಂತ ಅರಿವನ್ನು ಪರಿಶೋಧಿಸುವ, ಪ್ರಕಾಶಿಸುವ ಮತ್ತು ಅರಿತುಕೊಳ್ಳುವ ಅಗತ್ಯವನ್ನು ವಿಕಾಸಗೊಳಿಸುತ್ತದೆ. ಸ್ಕೌಟ್‌ಗಳು/ಗೈಡ್‌ಗಳು ತರಗತಿಯ ಕೋಣೆಗಳನ್ನು ದಾಟಿ ಹೊಸದನ್ನು ಹುಡುಕುತ್ತಾರೆ. ಕಲಿಯಲು ಇರುವ ಪ್ರತಿಭೆಗಳು ಪ್ರಕಟವಾಗುವಂತೆ ಮಾಡಿ, ಇತರರಿಗೆ ಜ್ಞಾನವನ್ನು ಮುಟ್ಟಿಸುತ್ತಾರೆ.

## ಒಂದು ಯುವಜನ ಚಳವಳಿ

ಸ್ಕೌಟ್-ಗೈಡ್ ಇದು ಒಂದು ಚಳವಳಿ..... ನಿರಂತರ ಚಳವಳಿ. ಸ್ಥಳೀಯ ಪರಿಸ್ಥಿತಿಗಳಿಗೆ ಅನುಗುಣವಾಗಿ ಎಲ್ಲ ಕಡೆಗಳಲ್ಲೂ ಅದು ಅರಳುತ್ತದೆ. ಹೊಂದಿಕೊಳ್ಳುತ್ತದೆ. ಸ್ಥಳೀಯ ಅಗತ್ಯಗಳಿಗೆ ಅನುಗುಣವಾಗಿ ಎಲ್ಲ ಕಡೆಗಳಲ್ಲೂ ಸಲ್ಲಿಸುತ್ತದೆ.

## ಅಂತಾರಾಷ್ಟ್ರೀಯ

ವಿಶ್ವದಲ್ಲಿ 216ಕ್ಕೂ ಹೆಚ್ಚು ರಾಷ್ಟ್ರಗಳಲ್ಲಿ ಮುನ್ನಣೆ ಪಡೆದ ಸ್ಕೌಟ್ ಸಂಸ್ಥೆಗಳು ಮತ್ತು ಅವುಗಳ ಶಾಖೆಗಳಿವೆ.

## ಬೆಳೆಯುತ್ತಿದೆ

1907ರಲ್ಲಿ ಆರಂಭವಾದಂದಿನಿಂದ ಸ್ಕೌಟ್‌ನ ಪ್ರಗತಿ ನಿಲ್ಲದೆ ಬೆಳೆಯುತ್ತಿದೆ. ಇಂದು 28 ದಶಲಕ್ಷಕ್ಕೂ ಹೆಚ್ಚು ಬಾಲಕ ಬಾಲಕಿಯರು ಅದರ ಸದಸ್ಯರಾಗಿದ್ದಾರೆ. ಕಳೆದ 20 ವರ್ಷಗಳಲ್ಲಿ ಸ್ಕೌಟ್ ಸದಸ್ಯತ್ವ ದ್ವಿಗುಣಗೊಂಡಿದೆ. ಹೆಚ್ಚಿನ ಬೆಳವಣಿಗೆ ಆಗಿರುವುದು ಅಭಿವೃದ್ಧಿಪರ ರಾಷ್ಟ್ರಗಳಲ್ಲಿ.

## ಎಲ್ಲರಿಗೂ ಮುಕ್ತ

ಸ್ಕೌಟ್‌ನ ಸ್ಥಾಪಕ ಲಾರ್ಡ್ ರಾಬರ್ಟ್ ಬೇಡನ್ ಪೊವೆಲ್‌ರು ರೂಪಿಸಿದ ಉದ್ದೇಶ, ತತ್ವಗಳು ಮತ್ತು ಮಾರ್ಗಗಳಿಗೆ ಅನುಗುಣವಾಗಿ ಎಲ್ಲರಿಗೂ ಮುಕ್ತವಾಗಿದೆ.

## ಉದ್ದೇಶಪೂರ್ಣ ವಿನೋದ

ಎಳೆಯ ವಯಸ್ಸಿನಿಂದ ದೈಹಿಕವಾಗಿ, ಬೌದ್ಧಿಕವಾಗಿ, ಸಾಮಾಜಿಕವಾಗಿ ಮತ್ತು ಆಧ್ಯಾತ್ಮಿಕವಾಗಿ ವಿಕಾಸಗೊಳ್ಳಲು ನೆರವಾಗುವ ತನ್ನ ಉದ್ದೇಶವನ್ನು ಸ್ಕೌಟ್ ವಿನೋದ, ವಿಹಾರಗಳ ಮೂಲಕ ಸಾಧಿಸುತ್ತದೆ.

## ವಯಸ್ಕರಿಗೆ ಒಂದು ಸವಾಲು

ಯುವಜನಾಂಗಕ್ಕೆ ಒಂದು ಅವಕಾಶ. ತಲೆಮಾರುಗಳ ಮಧ್ಯೆ ತಿಳಿವಳಿಕೆಯನ್ನು ಉತ್ತಮ ಪಡಿಸಿಕೊಳ್ಳುವ ಒಂದು ಮಾರ್ಗ. ವಯಸ್ಕನಾಯಕರು ತಮ್ಮ ಸೇವೆಯಲ್ಲಿ ಮೌಲಿಕವಾದ ತರಬೇತಿ ಮತ್ತು ಅನುಭವ ಪಡೆಯುತ್ತಾರೆ. ಇದರಿಂದ ಅವರ ವೈಯಕ್ತಿಕ ವಿಕಾಸಕ್ಕೂ ಅನುಕೂಲವಾಗುತ್ತದೆ.

## ರಾಜಕೀಯೇತರ

ಸ್ಕೌಟ್ ಗೈಡ್ ಚಳುವಳಿ ಯಾವುದೇ ರಾಜಕೀಯ ಪಕ್ಷ ಅಥವಾ ಸಂಸ್ಥೆಯನ್ನು ಪ್ರತಿನಿಧಿಸುವುದಿಲ್ಲ; ಅಷ್ಟೇ ಅಲ್ಲ, ಪ್ರತಿನಿಧಿಸಕೂಡದು. ಸ್ಕೌಟ್ ಗೈಡ್‌ಗಳು ತಮ್ಮ ಸಮುದಾಯಕ್ಕೆ, ಸಮಾಜಕ್ಕೆ ಮತ್ತು ದೇಶಕ್ಕೆ ರಚನಾತ್ಮಕ ಕೊಡುಗೆ ನೀಡುವಂತೆ ಅವರನ್ನು ಉತ್ತೇಜಿಸಲಾಗುತ್ತದೆ.

## ಸ್ವಪ್ರೇರಿತ

ಸ್ಕೌಟ್‌ಗಳು ಮತ್ತು ನಾಯಕರು ಸ್ಕೌಟಿಂಗ್ - ಗೈಡಿಂಗ್ ಅನ್ನು ಸ್ವಯಂ ಇಚ್ಛೆಯಿಂದ ಆಯ್ಕೆ ಮಾಡಿಕೊಳ್ಳಬೇಕು.

## ಒಂದು ವಿಧಾನ - ವೈಯಕ್ತಿಕ ಬದ್ಧತೆ

ಜೀವನದ ಒಂದು ಸರಳ ಸಂಹಿತೆ : ಸ್ಕೌಟ್ - ಗೈಡ್ ಪ್ರತಿಜ್ಞೆ ಮತ್ತು ನಿಯಮ

## ಮಾಡುತ್ತಾ ಕಲಿಯುವುದು

ಇತರರೊಡನೆ ಕ್ರಿಯಾಶೀಲ ಪಾಲುಗೊಳ್ಳುವಿಕೆ

## ಸಣ್ಣ ತಂಡಗಳಲ್ಲಿ ಕೆಲಸ ಮಾಡುವುದು

ನಾಯಕತ್ವ, ಗುಂಪು ಕುಶಲತೆ ಮತ್ತು ವೈಯಕ್ತಿಕ ಹೊಣೆಗಾರಿಕೆಯನ್ನು ಗಸ್ತು ದಳದಲ್ಲಿ ಬೆಳೆಸುವುದು.

## ಉತ್ತೇಜನ ಕಾರ್ಯಕ್ರಮಗಳು

ಯುವಜನರ ಆಸಕ್ತಿಯನ್ನು ಆಧರಿಸಿದ ಪ್ರಗತಿಪರ ಚಟುವಟಿಕೆಗಳು. ಸರಳತೆ, ಸೃಜನಶೀಲತೆ ಮತ್ತು ಪರಿಶೋಧಕತೆಗಳು ಒಟ್ಟುಗೂಡಿ, ಸಾಹಸ ಮತ್ತು ಸವಾಲುಗಳನ್ನು ಒದಗಿಸುವ ಒಂದು ಸಮೃದ್ಧ ಕಲಿಕೆಯ ಹಾಗೂ ನಿಸರ್ಗಕ್ಕೆ ಸಂಬಂಧಿಸಿದ ಚಟುವಟಿಕೆಗಳು

## ಒಂದು ಜೀವನ ಸಂಹಿತೆ

**ಒಂದು ಆಧ್ಯಾತ್ಮಿಕ ಆಯಾಮ** - ಭೌತಿಕ ಜಗತ್ತನ್ನು ಮೀರಿದ ಜೀವನದ ಆಧ್ಯಾತ್ಮಿಕ ಮೌಲ್ಯವನ್ನು ಹುಡುಕುವ ಒಂದು ಬದ್ಧತೆ.

**ಒಂದು ಸಾಮಾಜಿಕ ಆಯಾಮ** - ಇತರರ ಘನತೆಯನ್ನು ಮತ್ತು ನಿಸರ್ಗ ಜಗತ್ತಿನ ಪೂರ್ಣತೆಯನ್ನು ಗೌರವಿಸುತ್ತ ಸಮಾಜದ ಪ್ರಗತಿಯಲ್ಲಿ ಪಾಲುಗೊಳ್ಳುವುದು. ಸ್ಥಳೀಯ ರಾಷ್ಟ್ರೀಯ ಮತ್ತು ಅಂತಾರಾಷ್ಟ್ರೀಯ ಶಾಂತಿ ಸೌಹಾರ್ದತೆ ಮತ್ತು ಸಹಕಾರಗಳನ್ನು ಪ್ರವರ್ತಿಸುವುದು.

## ಒಂದು ವೈಯಕ್ತಿಕ ಆಯಾಮ

ವೈಯಕ್ತಿಕ ಹೊಣೆಗಾರಿಕೆಯ ಒಂದು ಪ್ರಜ್ಞೆಯನ್ನು ಬೆಳೆಸುವುದು ಮತ್ತು ಜವಾಬ್ದಾರಿಯುತ ಸ್ವಯಂ ಅಭಿವ್ಯಕ್ತಿಯ ಅಪೇಕ್ಷೆಯನ್ನು ಉತ್ತೇಜಿಸುವುದು.

## ಸ್ಕೌಟ್ ಮತ್ತು ಗೈಡ್‌ಗಳ ಪಾತ್ರ

**ವಾಸ್ತವ ಅಗತ್ಯಗಳನ್ನು ಪೂರೈಸುವುದು** - ಸ್ಕೌಟ್ ಮತ್ತು ಗೈಡ್‌ಗಳು ತಾವಿರುವ ಸಮುದಾಯಗಳು ಎದುರಿಸುವ ಅನೇಕ ವಿಷಯಗಳಲ್ಲಿ ಪಾಲುಗೊಂಡಿರುತ್ತಾರೆ. ಪರಸ್ಪರ ಗುರಿ ಸಾಧನೆಗಾಗಿ ಸ್ಕೌಟ್ ಮತ್ತು ಗೈಡ್‌ಗಳು ಸಮುದಾಯದಲ್ಲಿ ಇತರರೊಂದಿಗೆ ಕೆಲಸ ಮಾಡುತ್ತಾರೆ.

### ಸ್ಕೌಟ್ ಮತ್ತು ಗೈಡ್‌ಗಳು ತೊಡಗುವ ಚಟುವಟಿಕೆಗಳು :

1. ಸ್ವಚ್ಛತಾ ಕಾರ್ಯಕ್ರಮ, 2. ಆರೋಗ್ಯ (ಪಲ್ಸ್ ಪೋಲಿಯೊ ಹನಿ ನೀಡಿಕೆ ಕಾರ್ಯಕ್ರಮ, ಮೌಖಿಕ ಜಲೀಕರಣ ಚಿಕಿತ್ಸೆ - (ಓರಲ್ ರಿಹೈಡ್ರೇಶನ್ ಥೆರಪಿ ಇತ್ಯಾದಿ)), 3. ಸಾರಕ್ಷರತೆ, 4. ಸಸಿ ನೆಡುವುದು, 5. ಪರಿಸರ ಸಂರಕ್ಷಣೆ, 6. ಏಡ್ಸ್ ರೋಗ ಜಾಗೃತಾ ಕಾರ್ಯಕ್ರಮ, 7. ಕುಷ್ಠರೋಗ ನಿವಾರಣೆ, 8. ಕುಡಿಯುವ ನೀರಿನ ಸಂರಕ್ಷಣೆ ಮತ್ತು ಜಾಗೃತಿ ಬಗ್ಗೆ ಪ್ರಚಾರ, 9. ಕುಟುಂಬ ಜೀವನ ಶಿಕ್ಷಣ, 10. ಸಮುದಾಯ ಸೇವೆ, 11. ನೇತ್ರ ಶಸ್ತ್ರ ಚಿಕಿತ್ಸಾ ಶಿಬಿರ, 12. ರಕ್ತದಾನ ಶಿಬಿರ ಇತ್ಯಾದಿ

# ಪೋಷಕರಿಗೆ ಸಂದೇಶ

**ನಿಮ್ಮ ಹುಡುಗ / ಹುಡುಗಿ ಸ್ಕೌಟ್ / ಗೈಡ್ ಆಗಬೇಕು. ಏಕೆಂದರೆ,**

1. ಸ್ಕೌಟ್ / ಗೈಡ್ ಶಿಕ್ಷಣವು - ನಿಮ್ಮ ಹುಡುಗ / ಹುಡುಗಿಯ ಬಿಡುವಿನ ಸಮಯವನ್ನು ಹಿತಕರ ಸಹಪಾಠಿಗಳೊಂದಿಗೆ ಆರೋಗ್ಯಕರ ಚಟುವಟಿಕೆಗಳಲ್ಲಿ ತೊಡಗಿಸುವಂತೆ ಮಾಡುತ್ತದೆ.

2. ಸ್ಕೌಟ್ / ಗೈಡ್ ಶಿಕ್ಷಣವು - ಹುಡುಗ / ಹುಡುಗಿಯರ ಯಶಸ್ಸಿಗೆ ಅಗತ್ಯವಾದ ನೈತಿಕ ಬಲವನ್ನು ನೀಡುವುದಲ್ಲದೆ ಅವರ ಯಾವುದೇ ವೃತ್ತಿಯಲ್ಲಿ ಯಶಸ್ಸನ್ನು ಕೊಡುವುದು.

3. ಸ್ಕೌಟ್ / ಗೈಡ್ - ಇದು ಸೈನಿಕ ಚಳವಳಿಯಲ್ಲ. ನಾವು ಒಳ್ಳೆಯ ನಾಗರಿಕ ವ್ಯಕ್ತಿಗಳನ್ನು ರೂಪಿಸಹೊರಟಿದ್ದೇವೆಯೇ ವಿನಃ ಅನುಕರಣೆಯ ಸಿಪಾಯಿಗಳ ಒಂದು ತಂಡವನ್ನಲ್ಲ.

4. ಸ್ಕೌಟ್ / ಗೈಡ್ - ನಿಮ್ಮ ಹುಡುಗ / ಹುಡುಗಿಗೆ ಸೇವಾವಕಾಶಗಳನ್ನು ಕಲ್ಪಿಸಿಕೊಡುತ್ತದೆ. ದೇವರು ಮತ್ತು ನೆರೆಯವರಲ್ಲಿ ಗೌರವ ಭಾವನೆ ಇರುವುದು ಧರ್ಮದ ಮೂಲ ಎಂದು ತಿಳಿಸುತ್ತದೆ.

5. ಸ್ಕೌಟ್ / ಗೈಡ್ - ನಿಮ್ಮ ಹುಡುಗ / ಹುಡುಗಿಯನ್ನು ಕುಶಲರನ್ನಾಗಿ ಮಾಡುತ್ತದೆ. ಅವರ ಹವ್ಯಾಸಗಳು ಮನೆಗೆ ಉಪಯುಕ್ತವಾಗುವಂತೆಯೇ ಅವರಿಗೂ ಆಸಕ್ತಿಯ ವಿಷಯಗಳಾಗುತ್ತವೆ.

6. ಸ್ಕೌಟ್ / ಗೈಡ್ - ನಿಮ್ಮ ಹುಡುಗ / ಹುಡುಗಿಯಲ್ಲಿ ಒಂದು ಗೌರವ ಮತ್ತು ನಿಷ್ಠೆಯ ಭಾವನೆಯನ್ನು ಬೆಳೆಸುತ್ತದೆ. ಅವರು ನಿಮ್ಮನ್ನು ನಿರಾಸೆಗೊಳಿಸುವುದಿಲ್ಲ ಅಥವಾ ನಿಮಗೆ ಸುಳ್ಳು ಹೇಳುವುದಿಲ್ಲ.

7. ಸ್ಕೌಟ್ / ಗೈಡ್ - ನಿಮ್ಮ ಹುಡುಗ / ಹುಡುಗಿಗೆ ಸ್ವಾವಲಂಬನೆಯನ್ನು ಕಲಿಸುತ್ತದೆ. ಇದರಿಂದ ಅವರು ತಮಗೆ ತಾವೇ ರಕ್ಷಣೆ ಪಡೆದು ಇತರರಿಗೂ ನೆರವಾಗಬಲ್ಲರು.

8. ಸ್ಕೌಟ್ / ಗೈಡ್ - ನಿಮ್ಮ ಹುಡುಗ / ಹುಡುಗಿಗೆ ಆರೋಗ್ಯ ತಂದುಕೊಡುತ್ತದೆ. ಬಯಲ ವ್ಯಾಯಾಮ ಮತ್ತು ಆತ್ಮರಕ್ಷಣೆ ಮೂಲಕ ಅವರು ಸದೃಢ ದೇಹ ಮತ್ತು ಸದೃಢ ಮನಸ್ಸನ್ನು ಗಳಿಸುತ್ತಾರೆ.

9. ಸ್ಕೌಟ್ / ಗೈಡ್ - ನಿಮ್ಮ ಹುಡುಗ / ಹುಡುಗಿಯ ಸಹಜ ಪ್ರತಿಭೆಯನ್ನು ಗುರುತಿಸುತ್ತದೆ. ಮತ್ತು ಆ ಮೂಲಕ ಅವರು ಉದ್ಯೋಗದ ಆಯ್ಕೆಯಲ್ಲಿ ಸೂಕ್ತವಾದುದನ್ನು ಆರಿಸಿಕೊಳ್ಳಲು ನೆರವಾಗುತ್ತದೆ.

10. ಸ್ಕೌಟ್ / ಗೈಡ್ - ನಿಮ್ಮ ಹುಡುಗ / ಹುಡುಗಿಗೆ ಸಂತೋಷ ನೀಡುತ್ತದೆ. ಹರ್ಷೋತ್ಸಾಹಗಳ ಸಹವಾಸ ಮತ್ತು ನಿಸರ್ಗದ ಸುಖಾನುಭವದ ಮೂಲಕ ಅವರು ಖುಷಿಯಾಗಿರುತ್ತಾರೆ.

11. ಸ್ಕೌಟ್ / ಗೈಡ್ - ನಿಮ್ಮ ಹುಡುಗ / ಹುಡುಗಿಯ ದೃಷ್ಟಿಕೋನವನ್ನು ವಿಶಾಲಗೊಳಿಸುತ್ತದೆ. ಹೇಗೆಂದರೆ ಪ್ರತಿಯೊಂದು ನಾಗರಿಕ ಸುಸಂಸ್ಕೃತ ದೇಶದಲ್ಲಿ ಇರುವ ಅದರ ಶಾಖೆಗಳು ಪರಸ್ಪರ ಸಂಬಂಧವಿಟ್ಟುಕೊಂಡಿವೆ.

12. ಸ್ಕೌಟ್ / ಗೈಡ್ - ನಿಮ್ಮ ಹುಡುಗ / ಹುಡುಗಿಯನ್ನು ಯೋಗ್ಯ ವ್ಯಕ್ತಿಯನ್ನಾಗಿ ರೂಪಿಸುತ್ತದೆ. ಅವರು ನೀವು ಅಪೇಕ್ಷಿಸಿದಂತಹ ವ್ಯಕ್ತಿಗಳಾಗುತ್ತಾರೆ.



# THE BHARAT SCOUT & GUIDES

**National Headquarters, Lakshmi Mazumdar Bhawan**
**# 16, M.G. Marg, L.P. Estate, New Delhi-110 002.**

**Circular No. 27/2006** **Dated : 18-04-2006**

Subject : **21st World Scout Jamboree - Hyland Park Chelmsford UK from 27th July to 8th August 2007.**

Refere to National Headquarters Circular No. 118 dated 30-11-2005 you are be aware that 21st World Scout Jamboree will be hosted in the Centenary Year of Scouting which is very special event for all Scouts in the World and there is a great rush for Registration, Now limited No. of applications will only be accepted. As per Jamboree Circular, registration of IST must be less than the No. of participants. Hence, please promote participation of Scouts / Guides than the Adult Leaders for IST. Therefore, please recommend applications of participants to participate in 21st World Scout Jamboree in a big way along with Caution Money Rs. 3,000/- and Rs. 2000/- Registration fees. Following payment schedule be followed strictly to Deposit Registration fees as we have to register names of the participants in Advance because Limited No. of Registration for Scouts / Guides remains to be registered. 30,000 participants have already paid advance for registration to ensure their participation.

Caution Money of Rs. 3,000/- per head and Advance registration fee Rs. 2,000/- before 30th June 2006 and balance Registration fees Rs. 8,500/- before 30th October 2006. 5% discount will be given who are depositing their fees as per above - mentioned schedule. After 30th October 2006 participants have to Deposit their Registration Fees as follows.

Caution Money of Rs. 3,000/- per head and Advance Registration fees Rs. 2,000/- to be Deposited at National Headquarters on or before 15th November 2006 and Balance Registration fees Rs. 9,000/- to be deposited at National Headquarters on or before 30th March 2007.

No application will be received at National Headquarters after 31st December 2006. Please avail the opportunity in favour of Scouts / Guides.

Sd/-
**(D.L. Sharma)**
Joint. Director (s)

*Please refer to the earlier circular Published in the March issue of this Magazine for full details.*



ತುಮಕೂರು ಸೇಂಟ್‌ಮೇರಿಸ್ ಶಾಲೆಯಲ್ಲಿ ನೂತನವಾಗಿ
ಪ್ರಾರಂಭಗೊಂಡಿರುವ ಬನ್ನಿಸ್ (೩ರಿಂದ 5 ವರ್ಷ)



ಮಂಗಳೂರಿನಲ್ಲಿ ತರಬೇತಿ ಹೊಂದಿದ ಬನ್ನಿಸ್ ತಂಡದ ನಾಯಕಿಯರು



ಕೊರಟಗೆರೆ ತಾ॥ ಹರಿಹರಪ್ಪನಪಾಳ್ಯದಲ್ಲಿ ನಡೆದ ಸ್ವಚ್ಛತಾ ಕಾರ್ಯಕ್ರಮದಲ್ಲಿ
ಪಾಲ್ಗೊಂಡ ಕಬ್, ಬುಲ್ ಬುಲ್ ಮಕ್ಕಳು



ಹಳ್ಳಿಯೊಂದರ ಕಾರ್ಯಕ್ರಮದಲ್ಲಿ ಗೈಡ್ಸ್‌ನವರು
ಮಕ್ಕಳಿಗೆ ಹಾಡುಹೇಳಿಕೊಡುತ್ತಿರುವುದು



ಬೆಂಗಳೂರು ದಕ್ಷಿಣಜಿಲ್ಲೆ ನ್ಯೂ ಹೊರೈಜನ್‌ನ ಸ್ಕೌಟ್ಸ್ ಮತ್ತು ಗೈಡ್ಸ್‌ಗಳು
ಅಂಧ ಮಕ್ಕಳಿಗೆ ಹಣ್ಣು ವಿತರಿಸುತ್ತಿರುವುದು.



ಬೆಂಗಳೂರು ಉತ್ತರ ಜಿಲ್ಲೆ ನಿರ್ಮಲಾರಾಣಿ ಶಾಲೆಯ ಗೈಡ್‌ಗಳು ಚಾರಣ
ಕಾರ್ಯಕ್ರಮದಲ್ಲಿ ಭಾಗವಹಿಸುತ್ತಿರುವುದು

## A CENTURY OF SCOUTING 2007




27th July to 8th August 2007

**100** A Hundred years of Promise **2007**

Scouting will celebrate its Centenary in 2007

The Anniversary should be an occasion :

To demonstrate the unity of World Scouting/Guiding.
To improve and promote the quality of Scouting/Guiding.
To promote a more peaceful World.
To demonstrate a commitment to nature and the environment.
To show concern for all Communities.

YOUR SUPPORT WILL HELP US TO REACH OUR GOAL



Regd as News Paper (Magazine) No : **CPMG/KA/BGW-549/2006-08**
Permitted to Post under WPP System
Vide No.: **WPP-87** of SSP, BANGALORE WEST
Posted at: Bangalore City H.P.O. on 01-05-2006



ಕರ್ನಾಟಕ
ಸ್ಕೌಟ್ ಮತ್ತು ಗೈಡ್ ವಾರ್ತಾ ಪತ್ರಿಕೆ
KARNATAKA SCOUT & GUIDE News Magazine

If not delivered please return to :

**EDITOR, Karnataka Scout & Guide**
State Headquarters, Prof. P. Sivashankar Circle
Kondajji Basappa Road, Fort
Bangalore - 560 002. Ph:26701227.

**SMT. NIRMALA KALASHETTY**
**ASOC, Bharat Scouts & Guides**
**State Headquarters (Guide wing)**
**"Shanthi Gruha" No.39, Palace Road**
**Next to Maharani's College**
**Bangalore-560 001**

***Published for :*** The Bharat Scouts & Guides, Karnataka, State Headquarters, Fort, Bangalore - 560 002
by the State Secretary and Printed at : Sathyasri Printers (Pvt) Ltd., 5th Main, Chamarajpet, Bangalore - 560 018.